ಕಾಯಕವೇ ಕೈಲಾಸ



# ಸಿದ್ಧಗಂಗಾ



**ಬಸವ ಜಯಂತಿ ಹಬ್ಬದ ಹಾರ್ದಿಕ ಶುಭಾಶಯಗಳು**

ಸಂಪುಟ : ೫೬ ಏಪ್ರಿಲ್ ೨೦೨೦ ಸಂಚಿಕೆ : ೦೪



ಮಾರ್ಚ್ ೭ ರಂದು ಕಲಬುರ್ಗಿಯ ಪಿಡಿಎ ಇಂಜಿನಿಯರಿಂಗ್ ಕಾಲೇಜು ಆವರಣದಲ್ಲಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಪುತ್ಥಳಿಯನ್ನು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಲೋಕಾರ್ಪಣೆ ಮಾಡಿದರು. ಈ ಸಂದರ್ಭದಲ್ಲಿ ಎಚ್‌ಕೆಇ ಸಂಸ್ಥೆ ಅಧ್ಯಕ್ಷ ಡಾ.ಭೀಮಾಶಂಕರ ಬಿಲಗುಂದಿ, ಉಪಾಧ್ಯಕ್ಷ ಡಾ.ಶಿವಾನಂದ ದೇವರಮನಿ, ಡಾ.ಎಸ್.ಬಿ.ಕಾಮರಡ್ಡಿ, ಶ್ರೀ ಅರುಣಕುಮಾರ ಪಾಟೀಲ್, ಶ್ರೀ ವಿಜಯಕುಮಾರ ದೇಶಮುಖ, ಶ್ರೀ ನಾಗೇಂದ್ರಪ್ಪ ಮಂತಾಳೆ, ಡಾ.ಹರವಾಳ ಇತರರಿದ್ದರು.



ಶ್ರೀ ಸಿದ್ಧಗಂಗಾ ಕೃಷಿ ಕೈಗಾರಿಕಾ ವಸ್ತುಪ್ರದರ್ಶನದ ಉದ್ಘಾಟನೆಯನ್ನು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವರಾದ ಶ್ರೀ ಜೆ.ಸಿ. ಮಾಧುಸ್ವಾಮಿಯವರು ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಶಾಸಕರಾದ ಶ್ರೀ ಜಿ.ಬಿ. ಜ್ಯೋತಿಗಣೇಶ್, ತುಮಕೂರು ಜಿ.ಪಂ. ಅಧ್ಯಕ್ಷರಾದ ಶ್ರೀಮತಿ ಲತಾ ರವಿಕುಮಾರ್ ಮೊದಲಾದ ಗಣ್ಯರು ಉಪಸ್ಥಿತರಿದ್ದರು.



ನಡೆದಾಡುವ ದೇವರು, ತ್ರಿವಿಧ ದಾಸೋಹಿ, ಪರಮಪೂಜ್ಯ

**ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ**
**೧೧೩ನೇ ಜನ್ಮದಿನೋತ್ಸವದ**

ಶುಭ ಸಂದರ್ಭದಲ್ಲಿ ಪರಮಪೂಜ್ಯ ಶ್ರೀಗಳವರ ದಿವ್ಯ ಶಿವಚರಣಗಳಿಗೆ
ಅನಂತ ಕೋಟಿ ಭಕ್ತರ ಭಕ್ತಿಪೂರ್ವಕ ಪ್ರಣಾಮಗಳು

ತುಮಕೂರು ನಗರದಲ್ಲಿ ನೂತನವಾಗಿ ನಿರ್ಮಿಸಿರುವ
ಅತ್ಯಾಧುನಿಕ ಸೌಕರ್ಯಗಳನ್ನೊಳಗೊಂಡ ವಸತಿಗೃಹ

ಹೋಟೆಲ್ ಶ್ರೀ ವಿಶ್ವೇಶ್ವರ ಕಂಫರ್ಟ್

ಸರ್ಕಾರಿ ಕಾಲೇಜು ಮುಂಭಾಗ, ಬಿ.ಹೆಚ್. ರಸ್ತೆ, ತುಮಕೂರು-1
ದೂರವಾಣಿ : 2255883, 2257770, 2257774, 2257772 ಫ್ಯಾಕ್ಸ್ : 2255873



- ಮೂರು ವಿವಿಧ ದರ್ಜೆಯ 50 ಸುಸಜ್ಜಿತ ಕೊಠಡಿಗಳು
- ವಿಶೇಷ ವ್ಯವಸ್ಥೆಯ ಹವಾನಿಯಂತ್ರಿತ ಕೊಠಡಿಗಳು
- ಹವಾನಿಯಂತ್ರಿತ ಮಿನಿ ಕಾನ್ಫರೆನ್ಸ್ ಹಾಲ್
- ವಿಶಾಲವಾದ ಪಾರ್ಕಿಂಗ್ ವ್ಯವಸ್ಥೆ
- ಪ್ರತಿ ಕೊಠಡಿಗೆ ಟಿ.ವಿ., ಟೆಲಿಫೋನ್ ಸಂಪರ್ಕ
- ಹವಾನಿಯಂತ್ರಿತ ವಿ.ಐ.ಪಿ. ರೂಂ.
- ಶಾಶ್ವತ ವಿದ್ಯುತ್ ವ್ಯವಸ್ಥೆ
- ಪರಿಣತ ಸಿಬ್ಬಂದಿಯ ವಿನೀತ ಸೇವೆ

ಲಿಫ್ಟ್ ಸೌಲಭ್ಯವಿದೆ

ಹವಾನಿಯಂತ್ರಿತ ಉಪಹಾರ ಗೃಹ

ಮಾಲೀಕರು : ಎಸ್.ಜಿ. ಚಂದ್ರಮೌಳಿ, ಗ್ರಾನೈಟ್ ಉದ್ಯಮಿ






## ಅಂತರಂಗ



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥
ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೫೬ ಏಪ್ರಿಲ್ ೨೦೨೦ ಸಂಚಿಕೆ : ೦೪


ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು
ಸಂಸ್ಥಾಪಕ ಅಧ್ಯಕ್ಷರು

ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು
ಅಧ್ಯಕ್ಷರು

ಪ್ರಧಾನ ಸಂಪಾದಕರು :
ಹೆಚ್.ವಿ. ವೀರಭದ್ರಯ್ಯ

ಸಂಪಾದಕರು :
ಎಚ್.ಎಸ್. ಸಿದ್ಧಗಂಗಪ್ಪ

ಪ್ರಕಾಶಕರು :
ಕೆ.ಎಸ್. ಉಮಾಮಹೇಶ್, ಕೆ.ಬಿ. ಶಿವಶಂಕರಯ್ಯ

ಪತ್ರಿಕಾ ನಿರ್ವಹಣಾ ಸಮಿತಿ :
ಎಂ. ರೇಣುಕಾರಾಧ್ಯ
ಆರ್.ಎಸ್. ಮಲ್ಲೇಶಪ್ಪ
ವಿ. ಸೋಮಶೇಖರಯ್ಯ
ಎನ್.ವಿ. ಸತೀಶ್‌ಕುಮಾರ್

ಪ್ರಕಾಶನ :
ಹಳೆಯ ವಿದ್ಯಾರ್ಥಿಗಳ ಸಂಘ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪.

ಮುದ್ರಕರು :
ಶ್ರೀ ಗೀತಾಂಜಲಿ ಗ್ರಾಫಿಕ್ಸ್
ಬಿ-೭೧, ಕೆ.ಎಸ್.ಎಸ್.ಐ.ಡಿ.ಸಿ. ಕೈಗಾರಿಕನಗರ
ರಾಜಾಜಿನಗರ, ಬೆಂಗಳೂರು-೫೬೦ ೦೧೦



ವಿಳಾಸ :
"ಸಂಪಾದಕರು"
'ಸಿದ್ಧಗಂಗಾ' ಮಾಸಪತ್ರಿಕೆ, ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪
ದೂ: ೦೮೧೬-೨೨೮೨೩೨೨.

email: siddaganganews@gmail.com


## ಒಳಪುಟಗಳಲ್ಲಿ ..................




ಚಂದಾ ವಿವರ :
ಆಜೀವ ಸದಸ್ಯತ್ವ ರೂ. 1500/- ಬಿಡಿ ಪ್ರತಿ ರೂ. 20.00


ಲೇಖಕರ ಅಭಿಪ್ರಾಯಗಳು ಪತ್ರಿಕೆಯ ಅಭಿಪ್ರಾಯಗಳಲ್ಲ





# ಪ್ರಧಾನ ಸಂಪಾದಕರ ನುಡಿ........

ವಿಶ್ವದ ಧಾರ್ಮಿಕ ಇತಿಹಾಸದಲ್ಲಿ ಏಪ್ರಿಲ್ ೧ ಸುವರ್ಣಾಕ್ಷರಗಳಲ್ಲಿ ದಾಖಲಿಸುವಂತಹ ಐತಿಹಾಸಿಕ ದಿನ. ನಡೆದಾಡುವ ದೇವರು, ನಮ್ಮೆಲ್ಲರ ಆರಾಧ್ಯದೈವ, ತ್ರಿವಿಧ ದಾಸೋಹಮೂರ್ತಿ, ಮಹಾತಪಸ್ವಿ, ಮಹಾ ಮಾನವತಾವಾದಿ, ಕಾರುಣ್ಯಮೂರ್ತಿ, ವಿಶ್ವರತ್ನ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಜನ್ಮದಿನ. ಪರಮಪೂಜ್ಯ ಶ್ರೀಗಳವರ ೧೧೩ನೇ ಜನ್ಮ ದಿನೋತ್ಸವ ಶುಭ ಸಂದರ್ಭದಲ್ಲಿ ಪೂಜ್ಯರ ಶಿವಚರಣಗಳಿಗೆ ಸಿದ್ಧಗಂಗಾ ಭಕ್ತಿ ಕುಸುಮಗಳನ್ನು ಅರ್ಪಿಸುವುದರ ಮೂಲಕ ಧನ್ಯತೆಯನ್ನು ಪಡೆಯುತ್ತಿದೆ.

ಜಗತ್ತಿನ ಧಾರ್ಮಿಕ ಇತಿಹಾಸದಲ್ಲಿ ಒಂದು ಪೀಠದ ಮೇಲೆ ೮೯ ವರ್ಷಗಳ ಸುದೀರ್ಘಕಾಲ ಕುಳಿತು ಲೋಕಕಲ್ಯಾಣಕ್ಕಾಗಿ ತಮ್ಮನ್ನು ಅರ್ಪಣಾಭಾವದಿಂದ ಸಮರ್ಪಿಸಿಕೊಂಡವರು. ಪೂಜ್ಯ ಶ್ರೀಗಳವರ ಕತೃತ್ವಶಕ್ತಿ, ದೂರದೃಷ್ಟಿ, ಕ್ರಿಯಾಶೀಲತೆ, ಜೀವಕಾರುಣ್ಯ, ದೀನ-ದಲಿತರ ಮೇಲಿನ ಕಾಳಜಿ ಅನುಪಮವಾದುದು. ಗ್ರಾಮೀಣ ಪ್ರದೇಶದ ಲಕ್ಷಾಂತರ ಬಡ ಮಕ್ಕಳಿಗೆ ಅಕ್ಷರ ಜ್ಞಾನದ ಜೊತೆಗೆ ನೈತಿಕ ಶಿಕ್ಷಣವನ್ನು ನೀಡಿ ವಿಶ್ವದ್ಯಾದಂತ ನಮ್ಮ ಸಂಸ್ಕೃತಿಯ ರಾಯಭಾರಿಗಳನ್ನಾಗಿ ಮಾಡಿದ ಮಹಾನ್ ಶಿವಯೋಗಿಗಳು.

ಮಾನವೀಯ ಮೌಲ್ಯಗಳು ಶಿಥಿಲವಾಗುತ್ತಿರುವ ಇಂದಿನ ವಿಷಮ ಸನ್ನಿವೇಶದಲ್ಲಿ ಮಾನವೀಯ ಸೇವೆಯೇ ಮಹಾದೇವನ ಪೂಜೆಯೆಂದು ಭಾವಿಸಿದ್ದ ಪೂಜ್ಯ ಶ್ರೀಗಳು ಮಠಾಧಿಪತಿಗಳಿಗೆ ಆದರ್ಶವಾಗಿದ್ದರು, ಸ್ಫೂರ್ತಿಯಾಗಿದ್ದರು. ಕಾವಿಗೆ ಒಂದು ಘನತೆ ಗೌರವವನ್ನು ತಂದುಕೊಟ್ಟ ಜಂಗಮ ಮೂರ್ತಿಗಳು.

ಜಗಜ್ಯೋತಿ, ಸಮಾನತೆಯ ಹರಿಕಾರ, ತುಳಿತಕ್ಕೊಳ್ಳಗಾದವರನ್ನು ಮೇಲೆತ್ತಿದ್ದ ಮಹಾಮಾನವತಾವಾದಿ ಬಸವಣ್ಣನವರ ಜೀವನ ಸಿದ್ಧಾಂತಗಳನ್ನು, ಆದರ್ಶ ಮೌಲ್ಯಗಳನ್ನು ಶ್ರೀಮಠದಲ್ಲಿ ಸಾಕಾರಗೊಳಿಸಿದ ಪರಮಪೂಜ್ಯ ಶ್ರೀಗಳವರು ೧೨ನೇ ಶತಮಾನದ ಕಲ್ಯಾಣದಲ್ಲಿ ನಡೆದ ಸಮಾಜೋ ಧಾರ್ಮಿಕ ಪರಿವರ್ತನೆ, ದಾಸೋಹ ವೈಭವವನ್ನು ಮತ್ತೆ ನೋಡುವ ಭಾಗ್ಯವನ್ನು ನಮಗೆಲ್ಲ ಕರುಣಿಸಿದ್ದರು. ಸರ್ವಧರ್ಮ ಸಮನ್ವಯಕ್ಕೆ ಜೀವಂತ ಸಾಕ್ಷಿಯಾಗಿರುವ ಶ್ರೀ ಸಿದ್ಧಗಂಗಾ ಪಾವನ ಕ್ಷೇತ್ರದಲ್ಲಿ ವಿವಿಧ ಜಾತಿ-ವರ್ಗಗಳಿಗೆ ಸೇರಿದ ಹತ್ತು ಸಾವಿರಕ್ಕೂ ಹೆಚ್ಚು ವಿದ್ಯಾರ್ಥಿಗಳಿಗೆ ಆಶ್ರಯ ನೀಡಿ ಅವರ ಭವಿಷ್ಯ ಉಜ್ವಲವಾಗುವಂತೆ ಮಾಡಿದ ಕರುಣಾಮೂರ್ತಿಗಳು. ಶ್ರೀಮಠದಲ್ಲಿ ವ್ಯಾಸಂಗ ಮಾಡಿದ ಲಕ್ಷಾಂತರ ವಿದ್ಯಾರ್ಥಿಗಳು, ಪರಮಪೂಜ್ಯರ ಕೃಪಾಶೀರ್ವಾದದಿಂದ, ಅವರು ಕರುಣಿಸಿದ ಅರಿವಿನ ಜ್ಯೋತಿಯ ಮುಂಬೆಳಕಿನಲ್ಲಿ ತಮ್ಮ ಭವಿಷ್ಯವನ್ನು ರೂಪಿಸಿಕೊಂಡು ಸ್ವಾಭಿಮಾನದಿಂದ ಮುನ್ನಡೆಯುತ್ತಿದ್ದಾರೆ. ಇಂದು ಲಕ್ಷಾಂತರ ಮನೆ-ಮನಗಳಲ್ಲಿ ಶ್ರೀ ಶಿವಕುಮಾರ ಜ್ಯೋತಿ ಪ್ರಜ್ವಲವಾಗಿ ಬೆಳಗುತ್ತಿದೆ.

ಏಪ್ರಿಲ್ ೧ ರಂದು ಪ್ರತಿ ಮನೆಮನೆಯಲ್ಲಿಯೂ '**ದಾಸೋಹ ದಿನ**'ವನ್ನಾಗಿ ಆಚರಿಸುವುದರ ಮೂಲಕ ಪರಮಪೂಜ್ಯರಿಗೆ ಭಕ್ತಿ ನಮನಗಳನ್ನು ಸಲ್ಲಿಸೋಣ?

**ಪ್ರೊ. ಹೆಚ್.ವಿ. ವೀರಭದ್ರಯ್ಯ**
ಪ್ರಧಾನ ಸಂಪಾದಕರು







# ಶ್ರೀವಾಣಿ



## ಸಾಮಾಜಿಕ ಆಂದೋಲನಕ್ಕೆ ನಾಂದಿ ಹಾಡಿದ ಮಾನವೀಯತೆಯ ಸಾಕಾರರೂಪಿಯಾದ ಬಸವಣ್ಣನವರು

ಜಗತ್ತಿನ ಇತಿಹಾಸದಲ್ಲಿ ಹನ್ನೆರಡನೆಯ ಶತಮಾನ ಬೆಳಕಿನ ಯುಗವಾದದ್ದು. ಆಧ್ಯಾತ್ಮಿಕ ಪ್ರಜ್ಞೆಯಿಂದ ಕೂಡಿದ ಸಾಮಾಜಿಕ ಆಂದೋಲನಕ್ಕೆ ನಾಂದಿ ಹಾಡಿದ ಮಾನವೀಯತೆಯ ಸಾಕಾರರೂಪಿಯಾದ ಬಸವಣ್ಣನವರಿಂದ. ಇಂದಿಗೂ ಅವರು ಕೋಟ್ಯಾಂತರ ಜನರ ಹೃದಯ ಮಂದಿರದಲ್ಲಿ ಶಾಂತಭಾಸ್ಕರರಾಗಿ ರಾರಾಜಿಸುತ್ತಿದ್ದಾರೆ. ಅಹಂ ಮತ್ತು ಶೋಷಣಾರಾಹಿತ್ಯ ಸರಳ ಸಹಜವಾದ ಸಮಾಜ ನಿರ್ಮಾಣಕ್ಕಾಗಿ ಆಧ್ಯಾತ್ಮಿಕ ಮತ್ತು ಭೌತಿಕ ಶಕ್ತಿಗಳಲ್ಲಿ ಏಕತೆಯನ್ನು ಸಾಧಿಸಬೇಕೆಂಬುದನ್ನು ಅವರು 'ಲಿಂಗಜಂಗಮ'ದ ಅಂದರೆ ಕುಂದಿಲ್ಲದ ಸಮಾಜವೆಂಬ ದೇವರ ಮೂಲಕ ತೋರಿಸಿಕೊಟ್ಟರು. ಜನರು ಬಸವ ಪ್ರಜ್ಞಾವಂತರಾದರೆ ಈ ನಾಡು ಸರ್ವವೂ ಸುಂದರವಾಗುವುದರಲ್ಲಿ ಸಂಶಯವಿಲ್ಲ. ಬಸವಪ್ರಜ್ಞೆ ಎಂದರೆ ಸಕಲ ಚರಾಚರಗಳ ಬಗ್ಗೆ ಕಾಳಜಿಯನ್ನಿಟ್ಟುಕೊಂಡು ಪಂಚಮಹಾಭೂತಗಳನ್ನು ಜನಕಲ್ಯಾಣಕ್ಕಾಗಿ ಬಳಸುವ ಸಂಕಲ್ಪದೊಂದಿಗೆ ಬಸವಣ್ಣನವರನ್ನು ಅರಿಯುವುದು, ಕಾಯಕ ಸಿದ್ಧಾಂತಕ್ಕೆ ಬದ್ಧರಾಗುವುದು, ದಾಸೋಹಭಾವಕ್ಕೆ ಸಿದ್ಧರಾಗುವುದು ಲೌಕಿಕ ಮತ್ತು ಆಧ್ಯಾತ್ಮಿಕ ಬದುಕನ್ನು 'ಏಕಕಾಲ'ಕ್ಕೆ ಅನುಭವಿಸುವುದು.

* * *

ಸುಮಾರು ಎಂಟು ನೂರು ವರ್ಷಗಳ ಹಿಂದೆ ಕರ್ನಾಟಕದಲ್ಲಿ ಜನ್ಮತಾಳಿದ ಬಸವಣ್ಣನವರು ಚಿಕ್ಕವಯಸ್ಸಿನಿಂದಲೂ ಉದಾತ್ತ ಮನೋಭಾವುಳ್ಳವರಾಗಿ ದಿನಚರಿಯ ಸಾಮಾಜಿಕ ಜೀವನದಲ್ಲಿ ನಡೆಯುತ್ತಿರುವ ಅನ್ಯಾಯಗಳ ವಿರುದ್ಧ ಪ್ರಬಲ ಹೋರಾಟ ನಡೆಸಿದ ಧೀಮಂತ ವ್ಯಕ್ತಿ. ಧರ್ಮದ ಹೆಸರಿನಲ್ಲಿ ಪ್ರಚಲಿತವಾಗಿದ್ದ ಶೋಷಣೆ, ಮೇಲು ಕೀಳುಗಳೆಂಬ ಕಲ್ಪನೆ, ದೀನ-ದಲಿತರ ದಮನ ಮುಂತಾದ ಅನ್ಯಾಯಗಳನ್ನು ಹೋಗಲಾಡಿಸಲು ತಮ್ಮ ಜೀವನವನ್ನೇ ಮುಡಿಪಾಗಿಟ್ಟರು. ಶ್ರೇಷ್ಠವಾದ ಮಾನವೀಯ ಮೌಲ್ಯಗಳನ್ನು ಎತ್ತಿಹಿಡಿದು ಅವುಗಳನ್ನು ಅಳವಡಿಸಿಕೊಂಡು ಎಲ್ಲ ವ್ಯಕ್ತಿಯೂ ಉದ್ಧಾರವಾಗುವುದು ಸಾಧ್ಯವೆನ್ನುವ ಆತ್ಮವಿಶ್ವಾಸವನ್ನು ಮೂಡಿಸಿ ಸಕಲರನ್ನು ಉದ್ಧಾರ ಮಾಡಿದ ಮಹಾತ್ಮ. ಒಟ್ಟಿನಲ್ಲಿ ಶ್ರೇಷ್ಠವರ್ಗದ ಮಾನವತಾವಾದಿಯಾಗಿ ಜಗತ್ತಿನ ಮನುಕುಲದ ಸಮಸ್ಯೆಗಳನ್ನು ಪರಿಹರಿಸಲು ಹೆಣಗಾಡಿದ ಮಹಾನುಭಾವರು ಅವರು.

## ವಚನ-ತ್ರಿವಿಧಿ

### ಶ್ರೀ ಸಿದ್ಧಲಿಂಗೇಶ್ವರ ವಚನ



**ಅಂಗಕ್ಕಾಚಾರವೆ ಆಶ್ರಯ ಆ ಆಚಾರಕ್ಕೆ ಪ್ರಾಣವೇ ಆಶ್ರಯ**
**ಆ ಪ್ರಾಣಕ್ಕೆ ಜ್ಞಾನವೇ ಆಶ್ರಯ ಆ ಜ್ಞಾನಕ್ಕೆ ಲಿಂಗವೆ ಆಶ್ರಯ**
**ಆ ಲಿಂಗಕ್ಕೆ ಜಂಗಮವೆ ಆಶ್ರಯ**
**ಇಂತೀ ಪಂಚಲಕ್ಷಣವಾಗಿ ಪರಿಪೂರ್ಣವಾಗಿರಬಲ್ಲರೆ**
**ಸದ್ಭಕ್ತನೆಂಬೆನಯ್ಯಾ ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ ॥**

ಅಂಗಕ್ಕೆ ಆಚಾರವೆ ಆಶ್ರಯ – ಆಚಾರವಿಲ್ಲದ ಕಾಯ ಭೂತಕಾಯ ಜಡಕಾಯವೆಂದುದಾಗಿ ಅಂಗಕ್ಕಾಚಾರವೆ ಆಲಯವು. ಆಚಾರಕ್ಕೆ ಪ್ರಾಣವೆ ಆಶ್ರಯ ಆಚಾರಕ್ಕೆ ತಪ್ಪಿದಲ್ಲಿ ಪ್ರಾಣವ ಬಿಡುತ್ತಿರ್ದ ಕಾರಣ ಕಾರಣಕ್ಕೆ ಪ್ರಾಣವೆ ಆಲಯವು, ಆ ಪ್ರಾಣಕ್ಕೆ ಪ್ರಾಣವೆ ಆಶ್ರಯ– ಆಚಾರಕ್ಕೆ ತಪ್ಪಿದಲ್ಲಿ ಪ್ರಾಣವ ಬಿಡುತ್ತಿರ್ದ ಕಾರಣ ಚಾರಕ್ಕೆ ಪ್ರಾಣವೆ ಆಲಯವು, ಆ ಪ್ರಾಣಕ್ಕೆ ಜ್ಞಾನವೆ ಆಶ್ರಯ– ಜ್ಞಾನದಿಂದರಿದು ಪ್ರಾಣವ ಬಿಡುತ್ತಿರ್ದ ಕಾರಣ, ಪ್ರಾಣಕ್ಕೆ ಜ್ಞಾನವೆ ಆಲಯವು, ಆ ಜ್ಞಾನಕ್ಕೆ ಲಿಂಗವೆ ಆಶ್ರಯ – ಆ ಜ್ಞಾನದಿಂದರಿದು ಲಿಂಗಪೂಜೆಯ ಮಾಡುತ್ತಿರ್ದ ಕಾರಣ ಆ ಜ್ಞಾನಕ್ಕೆ ಲಿಂಗವೆ ಆಲಯವು, ಆ ಲಿಂಗಕ್ಕೆ ಜಂಗಮವೆ ಆಶ್ರಯ – ಆ ಜಂಗಮದ ಪಾದೋದಕ ಪ್ರಸಾದದಿಂದ ಲಿಂಗಕ್ಕೆ ಮಹಿಮಾ ಚಿತ್ಕಳೆ ಹೆಚ್ಚುತ್ತಿರ್ದ ಕಾರಣ ಆ ಲಿಂಗಕ್ಕೆ ಜಂಗಮವೆ ಆಲಯವು. ಇಂತೀಪಂಚ ಲಕ್ಷಣ ಐದು ಲಕ್ಷಣವು. ಪರಿಪೂರ್ಣವಾಗಿರಬಲ್ಲರೆ – ಕಿಷ್ಕಿಂಧಮಯವಾಗಿರಬಲ್ಲರೆ, ಸದ್ಭಕ್ತನೆಂಬೆನಯ್ಯಾ – ಭಕ್ತಿಸ್ಥಲದಾಚರಣೆಯುಳ್ಳಾತನೆಂದು ಹೇಳುವೆನಯ್ಯಾ, ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೆ.

(ಕೃಪೆ: ತೋಂಟದಾರ್ಯ ವಚನ ವ್ಯಾಖ್ಯೆ– ಸಂಪಾದಕರು– ಡಾ॥ ಸಾ.ಶಿ. ಮರುಳಯ್ಯ, ಪ್ರಕಾಶಕರು, ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ (ದಾಸೋಹ) ಸೇವಾ ಸಂಘ(ರಿ.) ಎಡೆಯೂರು– ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ)

### ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಪದವಿಯಾಸೆಯನೊಲ್ಲೆ ಪಟ್ಟ ದಾಸೆಯನಿಲ್ಲೆ
ಪಾದದಾಶ್ರಯವ ಬಿಡಲೊಲ್ಲೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸಾಸಿವೆಯ ಕಾಳಿನೊಳು ಸಾಗರವಾದಡಗಿರುವೆ
ಹಾಸುಬೀಸಾಗಿ ನಡೆದಿರುವೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಗಂಧಕರ್ಪೂರರವ ಪೂಸಿಕೊಂಡವರೆಲ್ಲ
ಗಂಧ ಕರ್ಪೂರದಂತಾಗರು ತಿಳಿಯೆಂದೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಪತಿತ ಪಾತಕಿಗಳಿಗೆ ಪಥವ ತೋರುವ ಗುರುವೆ
ಮತಿಗೆ ಮಂಗಳತೋರಿ ಹರಸುವ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಉದಯಾಸ್ತಮಾನದಲಿ ನಿಜಲಿಂಗದ ನೆನಹಿನಲಿ
ಎದೆದುಂಬಿ ಹಾಡುವುದ ತೊರೆಯದಿರು । ನೀನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಇರುವಶಕ್ತಿಯ ಬಳಸಿ ಉರಿವ ಹಣತೆಯಾಗು
ನಿರುತದಲಿ ಬೆಳಕೀವ ಸೊಡರಾಗು । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನೇರವಿರು ಮಾತಿನಲಿ ನೇರವಿರು ಕೃತಿಯಲ್ಲಿ
ನೇರುವಿರು ನಿನ್ನ ಚಿಂತನದಿ । ನೀನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಉಳುವ ನೇಗಿಲಮೊನೆಯ ಕುಳದಲ್ಲಿ ಅಡಗಿರುವೆ
ಹರಿವ ತೊರೆಯ ಮೇಲಲೆಯಾಗಿ । ಆಡುತಿಹ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಆಕಾಶದಗಲದಲಿ ಹರಡಿಹುದು ನಿನ್ನರೂಪ
ಭೂಮಿಯುದ್ದದಲಿ ಅರಳಿಹುದು । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬರೆವ ಲೆಕ್ಕಣಿಕೆಯ ಮೊನೆಯಲ್ಲಿ ಅರುಳುತಿಹ
ಬರೆವ ಹಾಳೆಯ ಮೇಲೆ ಮೂಡಿಬಹ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

**ಪ್ರೊ. ಹೆಚ್.ವಿ. ವೀರಭದ್ರಯ್ಯ**



## ನುಡಿನಮನ

### ಬುದ್ಧನ ಕಾರುಣ್ಯ – ಬಸವಣ್ಣ ಕಾಳಜಿಯೇ ಮೈವೆತ್ತ ರೂಪ

# ಪರಮಪೂಜ್ಯ ಡಾ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು

– ಡಾ. ಜಿ.ಎಸ್. ಶಿವರುದ್ರಪ್ಪ *

ಬೆಂಗಳೂರು ತುಮಕೂರುಗಳ ನಡುವೆ ಸದಾ ಸಾವಿರ ಗಾಲಿಗಳು ಉರುಳುವ ಹೆದ್ದಾರಿಯಲ್ಲಿ ಕ್ಯಾತ್ಸಂದ್ರದ ಬಳಿ ಬಲಕ್ಕೆ ಹೊರಳಿದರೆ ಅನತಿ ದೂರದಲ್ಲಿಯೇ ನಾವು ಋಷ್ಯಾಶ್ರಮ ಸದೃಶವಾದ ತಪೋವನವೊಂದನ್ನು ಪ್ರವೇಶಿಸಿದ ಅನುಭವಕ್ಕೆ ಒಳಗಾಗುತ್ತೇವೆ. ಅತ್ತ ಇತ್ತ ಎತ್ತರವಾದ ಮರಗಳು; ಅದರಾಚೆ ಹರಡಿಕೊಂಡ ಹೊಲಗಳು; ಮುಂದೆ ಕಾಣುವ ವಿದ್ಯಾರ್ಥಿ ವಸತಿಗಳ ಸಮುಚ್ಚಯ ಹಾಗೂ ಪಾಠಶಾಲೆಗಳು; ಭಕ್ತಿ ಜನಾಕರ್ಷಕವಾದ ಗದ್ದುಗೆಗಳು, ದೇವಾಲಯಗಳು; ಮಠಗಳು; ದಾಸೋಹ ಮತ್ತು ಪ್ರಸಾದ ನಿಲಯಗಳು; ಅತಿಥಿ ಗೃಹಗಳು; ಮುಂದೆ ಎಂದಿನಿಂದಲೋ ತಪಸ್ಸಿಗೆ ಕೂತಂತಿರುವ ಗುಡ್ಡ; ಆ ಗುಡ್ಡದ ಮೆಟ್ಟಿಲ ಸಾಲುಗಳನ್ನೇರಿ ಹೋದರೆ ಅದು ತಲುಪುವ ಸಿದ್ಧಲಿಂಗೇಶ್ವರ ದೇವಾಲಯದ ತಂಪು; ಅದರ ಎದುರಿನ ಗುಹೆಯೊಳಗೆ ಹಾಗೂ ಎಂದೂ ಅರಕೆಯಾಗದ "ಸಿದ್ಧಗಂಗೆ'ಯ "ತೀರ್ಥಜಲ' ಕುಂಡ; ಈ ದೇಗುಲದ ಪ್ರಾಕಾರದಿಂದ ಹೊರಬಂದು ಮೇಲೇರಿ ನಿಂತರೆ, ಒಂದೊಂದು ದಿಕ್ಕಿಗೆ ಒಂದೊಂದು ಆಕಾರದಲ್ಲಿ ದೃಗ್ಗೋಚರವಾಗುವ ಶಿವಗಂಗೆ ಬೆಟ್ಟ ಧೀರ ನಿಲುವು; ಎಡಕ್ಕೆ ಎತ್ತರವಾದ ರಾಮದೇವರ ಬೆಟ್ಟ; ಹಿಂದಕ್ಕೆ ಏರಿಳಿದ ಶಿಖರ ಕಾನನ-ಕಂದರಗಳ ದೇವರಾಯನದುರ್ಗ ಮತ್ತು ನಾವು ನಿಂತ ನೆಲೆಯಲ್ಲೆ ಎತ್ತರವಾದ ಧ್ವಜಸ್ತಂಭವೊಂದರ ಮೇಲೆ ಸದಾ ಸಭಿಕರನ್ನು ಕೈಬೀಸಿ ಕರೆಯುವ ಕಾವಿಯ ಬಾವುಟ.

ಇಂಥ ತಪೋವನ ಸದೃಶವಾದ "ಸಿದ್ಧಗಂಗೆ'ಯ ಈ ಪರಿಸರದಲ್ಲಿ ಅರ್ಧ ಶತಮಾನಕ್ಕೂ ಹಿಂದೆ, ಮೂರು ವರ್ಷಗಳ ಕಾಲ ನಾನೊಬ್ಬ ವಿದ್ಯಾರ್ಥಿಯಾಗಿ ಕಳೆದ ಕಾಲವನ್ನು ನೆನೆದುಕೊಂಡರೆ ಧನ್ಯತೆ ಹಾಗೂ ಕೃತಜ್ಞತೆಯ ಭಾವನೆಗಳಲ್ಲದೆ ಮತ್ತೇನೂ ಕಾಣವು. ಬಡತನ ಹಾಗೂ ಅನಕ್ಷರತೆಗಳ ಪ್ರಧಾನವಾದ ಅವಕಾಶ ಹೀನರಲ್ಲಿ ಒಬ್ಬನಾಗಿದ್ದ ನಾನು ನನ್ನಂಥ ಎಷ್ಟೋ ಜನ, ಈ ಹೊತ್ತು ತಲೆಯೆತ್ತಿಕೊಂಡು ದಿಟ್ಟತನದಿಂದ ಬದುಕಲು ಸಾಧ್ಯವಾಗಿರುವುದು, ಅಂದು ನನಗೆ ಈ ಶ್ರೀಕ್ಷೇತ್ರ ಒದಗಿಸಿದ ಅಶನ-ವಸತಿಗಳ ಆಶ್ರಯದಿಂದಲೇ, ಅಂದು ಇಂದಿನ ಹಾಗೆ, ಒಂದೊಂದು ಜಾತಿ-ಮತಗಳಿಗೊಬ್ಬೊಬ್ಬ "ಜಗದ್ಗುರು'ಗಳಿರಲಿಲ್ಲ. ಇಂದಿನ ಹಾಗೆ ಬಹುಸಂಖ್ಯೆ ಶಿಕ್ಷಣದ ವ್ಯಾಪಾರ ಸಂಸ್ಥೆಗಳೂ ಇರಲಿಲ್ಲ. ಬಹುತೇಕ ಸಾಮರಸ್ಯದಿಂದ ಬದುಕುತ್ತಿದ್ದ ಸಾಮಾಜಿಕ ಸಂದರ್ಭಗಳಿಂದಾಗಿ, "ಜಾತ್ಯತೀತತೆ'ಯ ಘೋಷಣೆಗಳಾಗಲೀ, ಭಾವೈಕ್ಯದ ಮಂತ್ರ ಪಠನಗಳಾಗಲೀ ಇರಲಿಲ್ಲ. ಸನಾತನ ಧರ್ಮವನ್ನು ಸಂರಕ್ಷಿಸಿಕೊಂಡು ಬರುವುದರಲ್ಲೇ ಬಹುಮಟ್ಟಿಗೆ ತೃಪ್ತವಾದ ಮೇಲ್ ವರ್ಗದ ಮಠಗಳನ್ನು ಹೊರತುಪಡಿಸಿದರೆ, ನಿಜವಾಗಿಯೂ ಸಾಮಾಜಿಕ ಕಾಳಜಿಗಳಿಂದ ತುಡಿಯುತ್ತ ಬಹುಜನ ಹಿತವನ್ನು ಗುರಿಯಾಗಿರಿಸಿಕೊಂಡ ಕೆಲವು ಮಠಗಳಿದ್ದದ್ದು-ಶರಣ ಧರ್ಮದವರಲ್ಲೇ. ಅವುಗಳೆಲ್ಲಲ್ಲ ಸಿದ್ಧಗಂಗೆಯ ಮಠ ಮಾರ್ಗದರ್ಶಕ ಸ್ಥಾನದಲ್ಲಿತ್ತು ಎಂದರೆ ಉತ್ಪ್ರೇಕ್ಷೆಯೇನಲ್ಲ.

ಬಹು ಹಿಂದಿನ ಕಾಲದಿಂದಲೇ ಅನೇಕ ಸಾಧು ಸಂತರ ತಪೋವನವಾಗಿದ್ದ ಸಿದ್ಧಗಂಗೆಯ ಈ ಪರಿಸರಕ್ಕೆ ಅನೇಕ ಪೌರಾಣಿಕವಾದ ಹಾಗೂ ಚಾರಿತ್ರಿಕವಾದ ನೆನಪುಗಳಿವೆ. ಹದಿನೈದನೆಯ ಶತಮಾನದ ಎಡೆಯೂರಿನಲ್ಲಿ, ಹಿಂದಿನ ಬನವಾಸಿ ಶರಣರ ಬದುಕನ್ನೂ ಬರಹಗಳನ್ನೂ ನೆನಪಿಗೆ ತರುವಂಥ ಉತ್ಕ್ರಾಂತಿಯೊಂದಕ್ಕೆ ಕಾರಣರಾದ ಮತ್ತು ನೂರಾ ಒಂದು ವಿರಕ್ತರ ಸಮುದಾಯದ ಕೇಂದ್ರ ವ್ಯಕ್ತಿಯಾಗಿ, ಶರಣ ಧರ್ಮದ ಪ್ರಸಾರ ಕಾರ್ಯದಲ್ಲಿ ತೊಡಗಿಸಿಕೊಂಡ ತೋಂಟದ

* ರಾಷ್ಟ್ರಕವಿಗಳು, ಬೆಂಗಳೂರು





ಸಿದ್ಧಲಿಂಗ ಯತಿಗಳು, ಈ ಪ್ರದೇಶದಲ್ಲಿ ಸಂಚರಿಸಿ ಕೆಲವು ಕಾಲ ಇದನ್ನು ತಮ್ಮ ತಪೋಭೂಮಿಯನ್ನಾಗಿ ಮಾಡಿಕೊಂಡಿದ್ದಾರೆಂದು ಹೇಳಲಾಗಿದೆ. ಆದರೆ ಈ "ತಪೋಭೂಮಿ'ಯಲ್ಲಿ ನಿಜವಾದ ಒಂದು ಪರಿವರ್ತನೆ ಯಾದದ್ದು ಹತ್ತೊಂಭತ್ತನೇ ಶತಮಾನದ ಶ್ರೀ ಅಟವೀಸ್ವಾಮಿಗಳ ಹಾಗೂ ಅವರ ಉತ್ತರಾಧಿಕಾರಿಗಳಾದ ಶ್ರೀ ಉದ್ದಾನ ಸ್ವಾಮಿಗಳ ಕಾಲದಲ್ಲಿಯೇ, ಹೆಸರೇ ಸೂಚಿಸುವಂತೆ ಕೇವಲ ಅರಣ್ಯ ವಾಸಿಗಳಾದ ಶ್ರೀ ಅಟವೀಸ್ವಾಮಿಗಳು, ಈ ಕ್ಷೇತ್ರಕ್ಕೆ ಬಂದು ಹೋಗುವ ಭಕ್ತಾದಿಗಳಿಗೆ "ಅನ್ನದಾಸೋಹ'ದ ವ್ಯವಸ್ಥೆಯನ್ನು ಪ್ರಾರಂಭ ಮಾಡಿದರು. ಅಂದು ಯಾವ ಒಂದು ಸುಮೂಹರ್ತದಲ್ಲಿ ಅವರು ಹೊತ್ತಿಸಿದರೋ ಆ ಅಡುಗೆ ಒಲೆಯ ಬೆಂಕಿ ಈ ಹೊತ್ತಿಗೂ ಆರಿಲ್ಲ. ನಾನು ಕಂಡಂತೆ ಹಗಲು ಇರುಳೂ ಇಂದಿಗೂ ಅಡುಗೆ ಮನೆಯ ಒಲೆಯಲ್ಲಿ ದೊಡ್ಡ ದೊಡ್ಡ ಕೊರಡುಗಳು ಉರಿಯುತ್ತಲೇ ಇರುತ್ತವೆ. ಭಾರೀ ಗಾತ್ರದ ಕಡಾಯಿಗಳಲ್ಲಿ ಅನ್ನ ಬೇಯುತ್ತಲೇ ಇರುತ್ತದೆ; ಮುದ್ದೆಯ ಎಸರು ಕುದಿಯುತ್ತಲೇ ಇರುತ್ತದೆ; ದೊಡ್ಡ ಹಾಸುಗಲ್ಲಿನ ಮೇಲೆ ರಾಶಿ ರಾಶಿ ಪೇರಿಸಿದ ರಾಗಿ ಮುದ್ದೆಯ ಕಿರಿ ಪರ್ವತಗಳು ರಾರಾಜಿಸುತ್ತಲೇ ಇರುತ್ತವೆ. ಪಂಕ್ತಿಯ ನಂತರ ಪಂಕ್ತಿಯಲ್ಲಿ ಇಲ್ಲಿನ ವಿದ್ಯಾರ್ಥಿಗಳೂ, ದಿನವೂ ಬಂದು ಹೋಗುವ ಬಹುಸಂಖ್ಯೆ ಭಕ್ತಾದಿಗಳೂ- ಕೂತು ಊಟ ಮಾಡುತ್ತಾರೆ. ವಿವಿಧ ಕಾರ್ಯಾಂತರಗಳಿಗಾಗಿ ಬಂದು ಸ್ವಾಮಿಗಳ ದರ್ಶನ ಪಡೆದವರಿಗೆ ಇಂದಿನ ಸ್ವಾಮಿಗಳು ಹೇಳುವ ಮೊದಲ ಮಾತೆಂದರೆ; **'ಊಟ ಮಾಡಿಕೊಂಡು ಹೋಗಿ'** ಅನ್ನುವುದು. ನಾನು ನಲವತ್ತರ ದಶಕದ ಕಾಲದಲ್ಲಿ ಈ ಮಠದಲ್ಲಿದ್ದಾಗ, ದಿನವೂ ರಾತ್ರಿ ಹತ್ತುಗಂಟೆಯ ನಂತರ ಕೇಳಿ ಬರುತ್ತಿದ್ದ ಒಂದು ಘೋಷಣೆ ಅಂದರೆ **'ಊಟ ಮಾಡೋರು ಯಾರಾದರೂ ಇದ್ದರೆ ಬರ್ರಪ್ಪ'** - ಅನ್ನುವುದು.

ನಾನು ಅನೇಕ ವೇಳೆ ಆಶ್ಚರ್ಯಪಟ್ಟಿದ್ದೇನೆ. ಇದೇನಿದು ಹಗಲೂ-ರಾತ್ರಿಯೂ ಬಂದು ಹೋಗುವ ಇಷ್ಟೊಂದು ಜನಕ್ಕೂ ಹೀಗೆ ಊಟದ ವ್ಯವಸ್ಥೆ ಮಾಡಲು ಈ ಮಠವೊಂದು ಪುರಾಣ ಕಾಲದ ಅಕ್ಷಯಪಾತ್ರೆಯೇ - ಎಂದು. ಆದರೆ ಈ ಮಠದ ಅಕ್ಷಯಪಾತ್ರೆ ಸಾರ್ವಜನಿಕರೇ ಅನ್ನುವುದು ಸೋಜಿಗದ ಸಂಗತಿಯೇನಲ್ಲ. ಈ ದಾಸೋಹವನ್ನು ಪ್ರಾರಂಭಿಸಿದ ಮೊದಲಲ್ಲಿ, ಶ್ರೀ ಅಟವೀ ಸ್ವಾಮಿಗಳೂ, ಶ್ರೀ ಉದ್ದಾನ ಸ್ವಾಮಿಗಳೂ ಜೋಳಿಗೆ ಹಿಡಿದು ಸುತ್ತಮುತ್ತಣ ಹಳ್ಳಿಗಳಿಂದ ಭಿಕ್ಷಾರೂಪದ ದವಸ ಧಾನ್ಯಗಳನ್ನು ಸಂಗ್ರಹಿಸಿ ತರುತ್ತಿದ್ದನ್ನೂ ಗಮನಿಸಿದ್ದೆ. ಈಗಿನ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳೂ ತಮ್ಮ ಕಾರ್ಯಕ್ಷೇತ್ರವನ್ನು ವಿಸ್ತರಿಸಿದಾಗ ಮೊದಲು ಮಾಡಿದ ಕೆಲಸವೇ ಇದು. ಸರ್ವಜ್ಞ ಹೇಳಿದಂತೆ **'ತಿರಿವರಿಂ ಸಿರಿವಂತರಾರು?'** ಇದರ ಪರಿಣಾಮವಾಗಿ, ಇಲ್ಲಿ ನಡೆಯುವ ನಿತ್ಯ ದಾಸೋಹ ಹಾಗೂ ಶಿಕ್ಷಣ ಕಾರ್ಯಗಳನ್ನು ಕಂಡು, ಜನ ತಾವಾಗಿಯೇ ತಮ್ಮ ಕಾಣಿಕೆ ಎಂದೋ ಕೊಡುಗೆ ಎಂದೋ ಗಾಡಿಗಾಡಿಗಳಲ್ಲಿ ದವಸ ಧಾನ್ಯಗಳನ್ನು ತಂದು ಮಠದ ಉಗ್ರಾಣಕ್ಕೆ ಅರ್ಪಿಸುವುದನ್ನು ನಾನೇ ನೋಡಿದ್ದೇನೆ. ಹೀಗೆ ಜನರ ನಂಬಿಕೆಯನ್ನು ಶ್ರದ್ಧೆಯನ್ನು, ಈ ಮಠದ ಸಾಮಾಜಿಕ ಜವಾಬ್ದಾರಿಯೊಳಗೆ ತಮ್ಮ ಪಾತ್ರವೂ ಕೂಡಿಕೊಂಡಿದೆ ಎಂಬ ವಿಶ್ವಾಸವನ್ನು ಉಳಿಸಿರುವುದು ಹಾಗೂ ಬೆಳೆಯಿಸಿರುವುದು, ಈ ಮಠದ ಕೇಂದ್ರ ಮೂರ್ತಿಯಾದ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳ ವ್ಯಕ್ತಿತ್ವವೇ ಅನ್ನುವುದು ಬಹುಮುಖ್ಯವಾದ ಸಂಗತಿಯಾಗಿದೆ.

ಮೊದಲ ಅಗತ್ಯ ಅನ್ನ, ನಿಜ; ಆದರೆ ಹೊಟ್ಟೆಯ ಹಸಿವಿನ ಜತೆಗೆ ಮನಸ್ಸಿನ ಹಸಿವೂ ಇದೆಯಲ್ಲ. ಅದಕ್ಕೆ ಆಹಾರ ಎಂದರೆ ಶಿಕ್ಷಣವೇ. ಈ ಕಾರ್ಯವೂ ಪ್ರಾರಂಭವಾದದ್ದು ಶ್ರೀ ಅಟವೀ ಸ್ವಾಮಿಗಳ ಶಿಷ್ಯರಾದ ಶ್ರೀ ಉದ್ದಾನ ಸ್ವಾಮಿಗಳು ಶಿಕ್ಷಣದ ವ್ಯವಸ್ಥೆಯ ಪರಂಪರೆಯನ್ನು ಅದಕ್ಕೆ ಜೋಡಿಸಿದರು. ಸ್ವಾರಸ್ಯದ ಸಂಗತಿ ಎಂದರೆ ಶ್ರೀ ಉದ್ದಾನ ಸ್ವಾಮಿಗಳು, ಪ್ರಾರಂಭ ಮಾಡಿದ್ದು ಸಂಸ್ಕೃತ ಪಾಠಶಾಲೆಯನ್ನು. ೧೯೧೭ರಲ್ಲಿ ಅಧಿಕೃತವಾಗಿ ಪ್ರಾರಂಭವಾದ ಈ ಪಾಠ ಶಾಲೆಯಲ್ಲಿ ಬ್ರಾಹ್ಮಣ, ಲಿಂಗಾಯಿತ, ಗೌಡ, ಹರಿಜನ, ಹೀಗೆ ವಿವಿಧ ಕೋಮುಗಳಿಗೆ ಸೇರಿದ ಐವತ್ಮೂರು ವಿದ್ಯಾರ್ಥಿ ಗಳಿದ್ದರಂತೆ. ಇದೊಂದು ಹತ್ತೊಂಬತ್ತನೆಯ ಶತಮಾನದಲ್ಲಿ ಸಂಭವಿಸಿದ ಮಹತ್ವದ ಘಟನೆಯೆಂದೇ ತಿಳಿಯಬೇಕು. ಯಾಕೆಂದರೆ ಇಂಡಿಯಾದಂಥ ದೇಶದ





ಪಾರಂಪರಿಕವಾದ ಸಂಸ್ಕೃತ ಭಾಷೆಯ ಶಿಕ್ಷಣವೆನ್ನುವುದು, ಶತಶತಮಾನಗಳ ಕಾಲ ಕೇವಲ ಮೇಲು ವರ್ಗದವರ ಗುತ್ತಿಗೆಯಾಗಿ, ಸಂಸ್ಕೃತ ಎನ್ನುವುದು, ಶೂದ್ರ ವರ್ಗದವರು ನಾಲಗೆಯಲ್ಲಿ ಉಚ್ಚರಿಸಿರುವುದಿರಲಿ ಕಿವಿಯಲ್ಲಿ ಕೇಳಬಾರದ "ದೇವಭಾಷೆ'ಯಾಗಿ ಬಹುಸಂಖ್ಯಾತ ಶೂದ್ರ ವರ್ಗದವರು ಇದರ ಕಲಿಕೆಯ ಸವಲತ್ತುಗಳಿಂದ ವಂಚಿತರಾಗಿ ಇದ್ದ ಒಂದು ಹಿನ್ನೆಲೆಯಲ್ಲಿ ಆ ಭಾಷೆ ಹಾಗೂ ಅದು ಬಳಸಿಕೊಳ್ಳುವ ತಿಳಿವಿಗೆ, ಈ ನಿರ್ಲಕ್ಷಿತ ಸಮುದಾಯವನ್ನೂ ಹಕ್ಕುದಾರರನ್ನಾಗಿ ಮಾಡುವ ದಿಟ್ಟತನದ ಪ್ರಯತ್ನ ವೊಂದು, ಈ ಐತಿಹಾಸಿಕ ಘಟನೆಯಲ್ಲಿ ಅಡಗಿದೆ ಎಂದು ನಾನು ತಿಳಿದಿದ್ದೇನೆ. ಹತ್ತೊಂಭತ್ತನೆಯ ಶತಮಾನದ ವಸಾಹತುಶಾಹಿಯ ಈ ಸಂದರ್ಭದಲ್ಲಿ ಕನ್ನಡ ಅಥವಾ ಇಂಗ್ಲೀಷ್ ಶಿಕ್ಷಣ ತಾನಾಗಿಯೇ ಲಭ್ಯವಾಗಬಹುದಾಗಿದ್ದ ಪರಿಸ್ಥಿತಿಯಲ್ಲಿ, ಶ್ರೀ ಉದ್ದಾನ ಸ್ವಾಮಿಗಳು ಸಂಸ್ಕೃತ ಪಾಠ ಶಾಲೆಯೊಂದನ್ನು ಶೂದ್ರ ಸಮುದಾಯದವರಿಗಾಗಿ ಪ್ರಾರಂಭಿಸಿದ್ದರ ಚಾರಿತ್ರಿಕ ಮಹತ್ವವನ್ನು, ಪ್ರತ್ಯೇಕವಾಗಿಯೇ ನಾವು ಪರಿಭಾವಿಸಬೇಕು. ಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು, ಹಿಂದಿನ ಆ ಎರಡೂ ಪರಂಪರೆಗಳನ್ನು ಅತ್ಯಂತ ಸಮರ್ಥವಾಗಿ ಮುಂದುವರಿಸಿ ಬಹುಸಂಖ್ಯೆ ವಿದ್ಯಾರ್ಥಿಗಳಿಗೆ ಅಶನ-ವಸತಿಗಳನ್ನು ಕಲ್ಪಿಸಿರುವುದಲ್ಲದೆ, ಆಧುನಿಕ ಯುಗದ ಶೈಕ್ಷಣಿಕ ಅಗತ್ಯಗಳಿಗೆ ತಕ್ಕಂತೆ ಬಹುಬಗೆಯ ಶಿಕ್ಷಣ ಸಂಸ್ಥೆಗಳನ್ನು ಪ್ರಾರಂಭಿಸಿ, ಹೊಸ ಎಚ್ಚರಕ್ಕೆ ಕಾರಣರಾಗಿದ್ದಾರೆ. ಈ ಹೊತ್ತಿಗೆ ಕರ್ನಾಟಕದಾದ್ಯಂತ ನಡೆಸುತ್ತಿರುವ ಶಾಲೆ-ಕಾಲೇಜುಗಳು ಸಂಖ್ಯೆ ನೂರಮೂವತ್ತಕ್ಕೂ ಮಿಗಿಲಾಗಿದೆ ಅನ್ನುವುದು ಅವರ ಶೈಕ್ಷಣಿಕ ಸಾಧನೆಯ ಸಂಕೇತವಾಗಿದೆ.

ಅರ್ಧ ಶತಮಾನಕ್ಕೂ ಹಿಂದಿನ, ನಲವತ್ತರ ದಶಕದಲ್ಲಿ ನಾನು ಈ ಮಠದಲ್ಲಿದ್ದಾಗ, ಶಾಲೆ-ಕಾಲೇಜುಗಳಲ್ಲಿ ಓದುತ್ತ ಇಲ್ಲಿ ಆಶ್ರಯ ಪಡೆದವರ ಸಂಖ್ಯೆ ಸುಮಾರು ನಾಲ್ಕು ನೂರರಷ್ಟಿತ್ತು. ಬಹುಶಃ ಯಾವುದೇ ಒಂದು ಸಂಸ್ಥೆ ಇಷ್ಟು ಸಂಖ್ಯೆ ವಿದ್ಯಾರ್ಥಿಗಳಿಗೆ ಉಚಿತವಾದ ಅಶನ-ವಸತಿಗಳ ಅವಕಾಶವನ್ನು ಕಲ್ಪಿಸಿಕೊಟ್ಟ ನಿದರ್ಶನ, ಆ ಕಾಲಕ್ಕಂತೂ ಇರಲಿಲ್ಲ. ಹಾಗೆ ಆಶ್ರಯ ಪಡೆದವರು ಕೇವಲ ವೀರಶೈವರೇನಲ್ಲ. ಸಮಾಜದ ಶೂದ್ರ ಸಮುದಾಯದ ಬೇರೆ ಬೇರೆ ಕೋಮುಗಳವರೂ ಇದ್ದರು. ಅವರ ಜತೆಗೆ ಕೆಲವರು ಹರಿಜನರೂ ಇದ್ದರು. ಅಷ್ಟೆ ಅಲ್ಲ ಮಡಿವಂತ ವರ್ಗದ ಬ್ರಾಹ್ಮಣ ವಿದ್ಯಾರ್ಥಿಗಳಿಗೂ ಇಲ್ಲಿ ಅವಕಾಶವಿತ್ತು. ಆದರೆ ಅವರೂ ಸಹ ಬ್ರಾಹ್ಮಣೇತರರ ಪಂಕ್ತಿಯಲ್ಲಿ ಕೂತು ಊಟ ಮಾಡಬೇಕೆಂಬ ಯಾವ ನಿರ್ಬಂಧವೂ ಇರಲಿಲ್ಲ. ಅವರು ಮಠದ ಉಗ್ರಾಣದಿಂದ ಅಡುಗೆಗೆ ಬೇಕಾದ ಪದಾರ್ಥಗಳನ್ನು ಪಡೆದುಕೊಂಡು ಆ ಕಾಲಕ್ಕೆ "ಛತ್ರ' ಎಂದು ಕರೆಯಲಾದ ಕಟ್ಟಡವೊಂದರ ಕೊಠಡಿಗಳಲ್ಲಿ ತಾವೇ ಅಡುಗೆ ಮಾಡಿಕೊಂಡು, ತಮ್ಮ ಅಧ್ಯಯನವನ್ನು ಮುಂದುವರಿಸುವ ಅವಕಾಶ ಕಲ್ಪಿಸಲಾಗಿತ್ತು.

ನಾವೆಲ್ಲ ಮುಖ್ಯವಾಗಿ ಲಿಂಗಾಯಿತರು ಒಳಗಿನ ಭೋಜನ ಶಾಲೆಯಲ್ಲೂ, ಇನ್ನುಳಿದವರು ಹೊರಗಿನ ಭೋಜನ ಶಾಲೆಯಲ್ಲೂ ಏಕ ಕಾಲಕ್ಕೆ ಸಾಲಾಗಿ ಕೂತು, ಬಡಿಸಲಾಗುತ್ತಿದ್ದ ಒಂದೇ ಅಡುಗೆಯನ್ನು ಊಟ ಮಾಡುತ್ತಿದ್ದೆವು. ಸಾಂಪ್ರದಾಯಿಕವಾದ ಈ "ವ್ಯತ್ಯಾಸ' ಅಂದು ಅಂಥ ದೊಡ್ಡ ಪ್ರಮಾದವೆಂದೇನೂ ತೋರುತ್ತಿರಲಿಲ್ಲ. ಮತ್ತು ಈ ಬಗೆಯ "ವ್ಯತ್ಯಾಸ'ಗಳನ್ನು ಎತ್ತಿ ಹಿಡಿದು "ರಾಜಕೀಯ' ಮಾಡುವ ಹವ್ಯಾಸವಾಗಲೀ ಉದ್ದೇಶವಾಗಲಿ ಯಾರಿಗೂ ಇದ್ದಂತೆ ತೋರಲಿಲ್ಲ. ಜತೆಗೆ ನಮ್ಮೆಲ್ಲರ ವಸತಿಗಳಲ್ಲಿ ಯಾವ ತಾರತಮ್ಯವೂ ಇರಲಿಲ್ಲ. ನಾವೆಲ್ಲ ಬಡವರೆಂಬ, ನಾವೊಬ್ಬ ಮನುಷ್ಯರೆಂಬ, ಆ ಕಾರಣಕ್ಕೆ ನಾವೆಲ್ಲ, ಒಂದೆಂಬ ಭಾವನೆಯೆ ಪ್ರಮುಖವಾಗಿತ್ತು. ದಿನವೂ ಸಂಜೆ ಏಳು ಗಂಟೆಗೆ ಸಾಮೂಹಿಕವಾಗಿ ಕೂತು ಪ್ರಾರ್ಥನೆ ಮಾಡುವ ಸಂದರ್ಭ ಕೂಡಾ ನಮ್ಮಲ್ಲಿ ಒಂದು ಆಧ್ಯಾತ್ಮಿಕವಾದ ಏಕತಾ ಭಾವನೆಯ ಸಂಕೇತವಾಗಿತ್ತು.

ಈಗ ಈ ಮಠದ ವಿದ್ಯಾರ್ಥಿಗಳ ಸಂಖ್ಯೆ ನಮ್ಮ ಕಾಲದ್ದಕ್ಕಿಂತ ಇಪ್ಪತ್ತುಪಟ್ಟು ಮಿಗಿಲಾಗಿದೆ. ಆದರೆ ಮಠದ ಜೀವನ ಕ್ರಮ ಕೆಲವು ವಿಚಾರಗಳಲ್ಲಿ ಬದಲಾಗಿದ್ದು ಎಲ್ಲಾ ವಿದ್ಯಾರ್ಥಿಗಳೂ ಸಾಮೂಹಿಕವಾಗಿ ಭೋಜನ ಸ್ವೀಕರಿಸುತ್ತಾರೆ. ಅಂದಿನಂತೆ ಇಂದೂ ಸಂಜೆ ನಡೆಯುವ ಪ್ರಾರ್ಥನಾ ಸಭೆ ಅಷ್ಟೇ ಗಂಭೀರವಾಗಿದೆ. ಸಹಸ್ರಾರು







ವಿದ್ಯಾರ್ಥಿಗಳು ದಿನಾ ಬೆಳಿಗ್ಗೆ, ಸಂಜೆ, ಪೂಜ್ಯ ಸ್ವಾಮಿಗಳ ನಿಯಂತ್ರಣ ಕೇಂದ್ರದಲ್ಲಿ ಸಾಮೂಹಿಕ ಪ್ರಾರ್ಥನೆಯಲ್ಲಿ ತೊಡಗುವ ದೃಶ್ಯ ಒಂದು ಅಪೂರ್ವವಾದ ಅನುಭವವಾಗಿದೆ. ತಮಗೆ ಎಷ್ಟೇ ಬಿಡುವಿಲ್ಲದ ಕೆಲಸ ಕಾರ್ಯಗಳಿರಲಿ, ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು – ಸಹಸ್ರಾರು ಸಂಖ್ಯೆ ತಮ್ಮ ತರುಣ ಶಿಷ್ಯ ಸಮುದಾಯದೊಂದಿಗೆ ಪ್ರಾರ್ಥನೆಗೆ ಕೂತುಕೊಳ್ಳುವ ಈ ಸಂದರ್ಭವನ್ನು ಕಳೆದುಕೊಳ್ಳುವುದಿಲ್ಲ. ಹಾಗೆ ನೋಡಿದರೆ ಬೆಳಗಿನ ಝಾವ ಎರಡೂವರೆ ಗಂಟೆಗೆ, ಹಳೆಯ ಮಠಕ್ಕೆ ಹೋಗಿ ಸ್ನಾನಾದಿಗಳನ್ನು ಮುಗಿಸಿ ಹಲವು ಗಂಟೆಗಳ ಕಾಲ ಶಿವಪೂಜಾ ಯೋಗದಲ್ಲಿ ಮಗ್ನರಾಗುತ್ತಾರೆ. ಹೀಗೆ ಮತ್ತೆ ಇರುಳಿನ ಪೂಜೆ ಕೂಡಾ. ಜತೆಗೆ ಅಧ್ಯಯನ ಹಾಗೂ ಚಿಂತನೆ. ಅವರು ಯಾವುದೇ ಒಂದು ವಿಷಯವನ್ನು ಕುರಿತು ಉಪನ್ಯಾಸಕ್ಕೆ ನಿಂತರೆಂದರೆ, ಅದರ ಹಿಂದೆ ಅವರಿಗಿರುವ ವಿವಿಧ ತತ್ವಜ್ಞಾನ ಕ್ಷೇತ್ರಗಳ ತಿಳುವಳಿಕೆಯೂ ಹಾಗೂ ಅವರು ತಮ್ಮ ಸಮಕಾಲೀನತೆಯಲ್ಲಿ ಅವುಗಳಿಗೆ ತೋರುವ ಪ್ರತಿಕ್ರಿಯೆಯೂ ಮತ್ತು ಅವುಗಳನ್ನು ಕುರಿತು ಮಾಡುವ ವ್ಯಾಖ್ಯಾನವೂ ಕೇಳಿದವರನ್ನು ಬೆರಗುಗೊಳಿಸುತ್ತವೆ. ನಾನೇ ನನ್ನ ಎಳೆಯ ದಿನಗಳಲ್ಲಿ ಕಂಡಂತೆ ಸಂಸ್ಕೃತ ಪಾಠಶಾಲೆಯ ಚಿಕ್ಕಮಕ್ಕಳಿಗೂ ಅವರು ತರಗತಿಗಳನ್ನು ತೆಗೆದುಕೊಳ್ಳುತ್ತಿದ್ದರು. ದಿನವೂ ಬರುವ ಭಕ್ತಾದಿಗಳ ಯೋಗಕ್ಷೇಮವನ್ನು ವಿಚಾರಿಸುವುದೂ, ತೀರ ಸಾಮಾನ್ಯರಾದ ಗ್ರಾಮೀಣ ಜನರ ನಂಬಿಕೆಗಳನ್ನು ಆಘಾತಗೊಳಿಸದೆ ಅವರಿಗೆ ಅಂತ್ರ-ತಂತ್ರಾದಿಗಳನ್ನು ಬರೆದುಕೊಟ್ಟು, ಅವರನ್ನು ಸಮಾಧಾನಗೊಳಿಸುವುದೂ, ದಿನವೂ ನಡೆಯುತ್ತಿದ್ದ ಮಠದ ವಿಸ್ತರಣ ಕಾರ್ಯಗಳನ್ನು ಪರಿಶೀಲಿಸುವತ್ತ ಕೆಲಸಗಾರರಿಗೆ ಸೂಚನೆಗಳನ್ನು ಕೊಡುತ್ತ ಸಮಯ ಬಿದ್ದರೆ ತಾವೇ ಕೂಲಿಗಾರರ ಜತೆ ಹೆಗಲು ಕೊಟ್ಟು ಕೆಲಸ ಮಾಡುವುದೂ, ಇದಕ್ಕಿದ್ದ ಹಾಗೆ ಅಡುಗೆ ಮನೆಗೆ ಪ್ರವೇಶಿಸಿ, ತಾವೇ ಮುದ್ದೆ ತಿರುಹುವುದೂ, (ಭಾರಿ ಗಾತ್ರದ ಪಾತ್ರೆಗಳಲ್ಲಿ ಬೇಯುತ್ತಿದ್ದ ಮುದ್ದೆಯನ್ನು ತಿರುಹುವುದು ಸುಲಭವಾದ ಕೆಲಸವೇನಲ್ಲ. ಅದಕ್ಕೆ ಬಾಹುಬಲವೂ ಬೇಕು!) ಊಟದ ಪಂಕ್ತಿಯ ನಡುವೆ ನಿಂತು ಮಕ್ಕಳೂ ಹಾಗೂ ಭಕ್ತಾದಿಗಳು ಊಟ ಮಾಡುವುದನ್ನು ಪ್ರೀತಿಯಿಂದ ವೀಕ್ಷಿಸುವುದೂ, ಇಂಥ ಬಹುಸಂಖ್ಯೆಯ ಕಾರ್ಯಚಟುವಟಿಕೆಗಳನ್ನು ನಾನು ನೋಡುತ್ತ ಅಲ್ಲಿ ಪುಟಿಯುವ ಜೀವ ಕಾರುಣ್ಯಕ್ಕೆ ಬೆರಗಾಗಿದ್ದೇನೆ.

ಒಂದು ಕಾಲವಿತ್ತು, ವೈರಾಗ್ಯ ಎಂದರೆ ಸಂನ್ಯಾಸ ಎಂದರೆ ಸಂಸಾರವನ್ನು ತೊರೆದು ಸಮಾಜವನ್ನು ತೊರೆದು ಜನಸಂಗ ದೂರವಾದ ಕಾಡುಮೇಡುಗಳಲ್ಲೋ, ಯಾರು ಪ್ರವೇಶ ಮಾಡಲಾಗದ ಗಿರಿ-ದರಿಗಳ ಗುಹಾಂತರಗಳಲ್ಲೋ ಧ್ಯಾನ ತಪಸ್ಸುಗಳಲ್ಲಿ ನಿರತರಾಗಿ ಆಧ್ಯಾತ್ಮ ಸಾಧನೆಯಲ್ಲಿ ತೊಡಗುವುದು ಎಂದು. ಆದರೆ ಬುದ್ಧನ ಕಾಲಕ್ಕೆ ಸಂನ್ಯಾಸದ ಈ ಕಲ್ಪನೆ ಬಹುಶಃ ಬದಲಾದಂತೆ ತೋರುತ್ತದೆ. ಸಿದ್ಧಾರ್ಥ ತಾನು ಬುದ್ಧನಾದ ಮೇಲೆ ಅನಿಸಿತು. ಈ ಲೋಕದ ದುಃಖ ದಾರಿದ್ರ್ಯಗಳ ನಿವಾರಣೆಗೆ ವಿನಿಯೋಗವಾಗದಿದ್ದರೆ ತಾನು ಪಡೆದ "ಬೋಧಿ"ಗೆ ಏನರ್ಥ – ಎಂದು. ಆದ ಕಾರಣವೇ ಆ ತನ್ನ ಧರ್ಮವನ್ನು ಒಪ್ಪಿಕೊಂಡು ಒಂದು "ಸಂಘ"ಕ್ಕೆ ಸೇರಿದ ಸನ್ಯಾಸಿಗಳಿಗೆ ಹೇಳಿದ, ಧರ್ಮ ಅನ್ನುವುದು ಬಹುಜನ ಹಿತಕ್ಕಾಗಿ, ಬಹುಜನ ಸುಖಕ್ಕಾಗಿ ತಮ್ಮನ್ನು ತಾವು ಸೇವಾ ಮನೋಭಾವದಿಂದ ತೊಡಗಿಸಿಕೊಳ್ಳುವ ಕ್ರಿಯೆಯಲ್ಲಿ ಇದೆ ಎಂದು. ಬುದ್ಧನ ಅನಂತರ ಅನೇಕ ಶತಮಾನಗಳ ಮೇಲೆ, ಕರ್ನಾಟಕ ಕಲ್ಯಾಣ ಕೇಂದ್ರದಲ್ಲಿ ಬಸವಾದಿ ಶರಣರಿಂದ ತರ-ತಮ ವಿರೋಧಿಯೂ, ಮಾನವ ಕೇಂದ್ರಿತವೂ, ಸಾಮಾಜಿಕ ಜವಾಬ್ದಾರಿಯಿಂದ ಕೂಡಿದ್ದೂ ಆಗಿದೆ. ಸಂಸಾರಿಯೇ ಆಗಲಿ; ಸಂನ್ಯಾಸಿಯೇ ಆಗಲಿ; ಈ ಮರ್ತ್ಯದ ಸಾಮಾಜಿಕ ನೆಲೆಯೊಳಗೆ ನಿಂತೇ, ಶಿವಯೋಗವನ್ನು ಸಾಧಿಸುತ್ತ, ಕಾಯಕ ಅಥವಾ ಶಿವಾರ್ಪಿತ ಮನೋಭಾವದ ದುಡಿಮೆಯಲ್ಲಿ ತನ್ನನ್ನು ತೊಡಗಿಸಿಕೊಳ್ಳುತ್ತ ಸರ್ವಜನ ಹಿತದಲ್ಲಿ ನಿರತವಾಗಬೇಕೆಂಬುದೇ ಇದರ ತಿರುಳು. ಬುದ್ಧನ ಮಾನವ ಕಾರುಣ್ಯವನ್ನೂ, ಬಸವನ ತೀವ್ರ ಸಾಮಾಜಿಕ ಕಾಳಜಿಗಳನ್ನೂ ಒಟ್ಟಿಗೇ ಕಾಣಬಹುದಾದ ಸಿದ್ಧಗಂಗೆಯಂಥ ಅಪರೂಪದ ಕ್ಷೇತ್ರಗಳಲ್ಲಿ ಹಾಗೂ ಈ ಮನೋಧರ್ಮದ ಜೀವಂತ ಪ್ರತಿನಿಧಿಯಂತಿರುವ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳಂಥವರ ವ್ಯಕ್ತಿತ್ವದಲ್ಲಿ ಮಾತ್ರ.







ನುಡಿನಮನ

# ಪರಮಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮೀಜಿಯವರ ಸಂಸ್ಕೃತ ಪ್ರೇಮ

– ಡಾ. ಸಿ. ಶಿವಕುಮಾರಸ್ವಾಮಿ *

ಜಗತ್ತಿನ ಹಲವು ಪ್ರಥಮಗಳ ಸಂಗಮಕ್ಷೇತ್ರ ಸಿದ್ಧಗಂಗೆ, ಸಿದ್ಧಗಂಗೆಯ ಹೆಸರನ್ನು ಕೇಳುತ್ತಲೇ ಎಂತಹವರಿಗೂ ರೋಮಾಂಚನ, ಆಶ್ಚರ್ಯಗಳು ಉಂಟಾಗುವುದು ಸ್ವಾಭಾವಿಕ. ರೋಮಾಂಚನ-ಆಶ್ಚರ್ಯಗಳೇಕೆ ? ಎಂದರೆ ಅಲ್ಲಿ ನಡೆಯುವ ದಿನನಿತ್ಯದ ದಾಸೋಹ !! ಅದರ ಹಿಂದಿನ ಪ್ರೇರಕ ದೈವೀಶಕ್ತಿ ತ್ರಿವಿಧ ದಾಸೋಹ ಮೂರ್ತಿಗಳೂ, ತಪೋಧನರೂ, ಸಮಾಜದ ಹಿತಚಿಂತಕರೂ, ದೀನ-ದಲಿತರ ಏಳ್ಗೆಗೋಸ್ಕರ ಹಗಲಿರುಳೆನ್ನದೆ ಶ್ರಮಿಸುತ್ತಿರುವವರೂ, ಬಹುಭಾಷಜ್ಞರೂ, ಭಾಷಾಪ್ರೇಮಿಗಳೂ, ವಯೋವೃದ್ಧರೂ, ಜ್ಞಾನವೃದ್ಧರೂ ಆದ ಶ್ರೀಮಠದ ಅಧಿಪತಿಗಳಾಗಿದ್ದ ಪರಮಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು.

ಮಠಶ್ಛಾತ್ರಾದಿ ನಿಲಯೋ **(ಅಮರಕೋಶ ೨.೫೦)** ಎಂಬ ಕೋಶ ವಾಕ್ಯಾನುಸಾರವಾಗಿ **'ಮಠ'** ಎಂದರೆ ಶಿಷ್ಯರು ವಾಸಿಸುವ ನಿಲಯಗಳೆಂದರ್ಥ. ಅರ್ಥಾತ್ ವಿದ್ಯಾರ್ಥಿ ನಿಲಯಗಳು. ಪ್ರಾಚೀನ ಭಾರತದಲ್ಲಿ ವೀರಶೈವ ಮಠಗಳು ಗುರುಕುಲಗಳಾಗಿದ್ದು, ಜ್ಞಾನದಾಹಿಗಳಿಗೆ ಅಸನ-ವಸನಗಳನ್ನು ನೀಡಿ ಜ್ಞಾನಾರ್ಜನೆ ಮಾಡಿಸುತ್ತಿದ್ದಂತಹ ವಿದ್ಯಾ ಕೇಂದ್ರಗಳಾಗಿದ್ದವು. ಕರ್ನಾಟಕದ ವೀರಶೈವ ಮಠಗಳ ಕೊಡುಗೆ ಈ ದಿಶೆಯಲ್ಲಿ ಮಹತ್ತರವಾದುದು. ಮಠಗಳಲ್ಲಿಯೂ ಶ್ರೀ ಸಿದ್ಧಗಂಗಾ ಮಠವು ಸಮಸ್ತ ಮಠಗಳ ಶಿರೋಮಣಿಯಂತಿದ್ದು, ಇತರ ಮಠಗಳಿಗೆ ಮಾದರಿಯಾಗಿದೆ.

ನಮ್ಮ ದೇಶದ ಮೇಲೆ ಮುಸ್ಲಿಮರು ದಾಳಿ ಮಾಡುವುದಕ್ಕಿಂತ ಮೊದಲು ಸಂಸ್ಕೃತ ಭಾಷೆಯು ಸಾಹಿತ್ಯಿಕ ಭಾಷೆಯಾಗಿದ್ದು, ಸಮಾಜದ ಸುಶಿಕ್ಷಿತವರ್ಗದವರ ಆಡುಭಾಷೆಯೂ ಆಗಿತ್ತು. ವೇದ-ವೇದಾಂತಗಳು, ರಾಮಾಯಣ-ಮಹಾಭಾರತಾದಿ ಇತಿಹಾಸಗಳು, ಅಷ್ಟಾದಶ ಪುರಾಣಗಳು, ಆಗಮಗಳು, ಛಂದಸ್ಸು, ವ್ಯಾಕರಣ, ಆಯುರ್ವೇದ, ಗಣಿತ, ಖಗೋಳ, ಭೂಗರ್ಭ, ಭೌತ, ರಸಾಯನ..... ಹೀಗೆ ಎಲ್ಲ ಪ್ರಕಾರದ ಕಾವ್ಯ, ಶಾಸ್ತ್ರಗಳ ರಚನೆಯು ಕೇವಲ ಸಂಸ್ಕೃತ ಭಾಷೆಯಲ್ಲಿತ್ತು. ಆದ್ದರಿಂದ ಜ್ಞಾನಾರ್ಜನೆಯ ಕೇಂದ್ರಗಳಾಗಿದ್ದ ವೀರಶೈವ ಮಠಗಳಲ್ಲಿ ಸಂಸ್ಕೃತದ ವಾತಾವರಣ ಬಹು ಪ್ರಾಚೀನಕಾಲದಿಂದಲೂ ಇದ್ದು, ಸಂಸ್ಕೃತ ಭಾಷೆಯನ್ನು ಪಾಲಿಸುತ್ತ, ಪೋಷಿಸುತ್ತಾ ಬಂದಿರುವುದು ಇತಿಹಾಸದ ಪುಟಗಳನ್ನು ತಿರುವಿಹಾಕಿದಾಗ ಸ್ಪಷ್ಟವಾಗುತ್ತದೆ. ೨೦-೨೧ನೇ ಶತಮಾನದಲ್ಲಿಯೂ ಕೂಡ ವೀರಶೈವ ಮಠಾಧಿಪತಿಗಳು ಸಂಸ್ಕೃತ ಪ್ರೇಮಿಗಳಾಗಿದ್ದು, ತಮ್ಮ ಮಠಗಳಲ್ಲಿ ಸಂಸ್ಕೃತಾಧ್ಯಯನ – ಅಧ್ಯಾಪನಾದಿಗಳಿಗೆ ಪ್ರೋತ್ಸಾಹವೀಯುತ್ತಿರುವುದು ಪ್ರತಿಯೊಬ್ಬರಿಗೂ ತಿಳಿದ ವಿಷಯವೇ ಸರಿ. ಇಂತಹ ಸಂಸ್ಕೃತಾಭಿಮಾನಿಗಳಲ್ಲಿ ಸಿದ್ಧಗಂಗೆಯ ಮಠಾಧಿಪತಿಗಳಾದ ಪರಮಪೂಜ್ಯ ಮಹಾಸ್ವಾಮೀಜಿಯವರು ಮೇರು ಸದೃಶರಾಗಿದ್ದಾರೆ.

ಶ್ರೀ ಸಿದ್ಧಗಂಗಾ ಮಠದಲ್ಲಿ ೧೯ನೇ ಶತಮಾನದಲ್ಲಿಯೇ ಲಿಂಗೈಕ್ಯ ಶ್ರೀ ಅಟವಿ ಸ್ವಾಮಿಗಳು ಬೆಟ್ಟದ ಮೇಲಿನ ಗವಿಯಲ್ಲಿ ದಾಸೋಹ ಹಾಗೂ ಸಂಸ್ಕೃತಾಭ್ಯಾಸವನ್ನು ಆರಂಭಿಸಿದರೆಂದು ತಿಳಿದುಬರುತ್ತದೆ. ೧೯೧೭ ರಲ್ಲಿ ಪರಮ ತಪೋನಿಧಿಗಳಾದ ಲಿಂಗೈಕ್ಯ ಶ್ರೀ ಉದ್ದಾನ ಶಿವಯೋಗಿಗಳು ಅಧಿಕೃತವಾಗಿ ಸಂಸ್ಕೃತ ಪಾಠಶಾಲೆಯನ್ನು ಶ್ರೀಮಠದಲ್ಲಿ ಆರಂಭಿಸಿದರು. ಸಂಸ್ಕೃತ ಪಾಠಶಾಲೆ ಆರಂಭವಾದಾಗ ಒಬ್ಬ ಶಿಕ್ಷಕರು ಹಾಗೂ ೨೦ ವಿದ್ಯಾರ್ಥಿಗಳಿದ್ದರು. ಪರಮಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಮಠಾಧೀಪತಿಗಳಾಗುತ್ತಲೇ ಶ್ರೀಮಠದ ದಾಸೋಹ ಕ್ಷೇತ್ರವನ್ನು ವರ್ಷದಿಂದ ವರ್ಷಕ್ಕೆ ವಿಸ್ತರಿಸುತ್ತಿದ್ದಂತೆ ಸಂಸ್ಕೃತಾಧ್ಯಯನ ಮಾಡುವ ವಿದ್ಯಾರ್ಥಿಗಳ ಸಂಖ್ಯೆಯೂ ಏರತೊಡಗಿ ಇಂದು ಸುಮಾರು ೫೬೦೦

* ನಂ. ೬, ೧ನೇ ಕ್ರಾಸ್, ಪಿ.ಎಫ್. ಲೇಔಟ್, ಮಾರೇನಹಳ್ಳಿ, ವಿಜಯನಗರ. ಬೆಂಗಳೂರು-೫೬೦ ೦೪೦

ವಿದ್ಯಾರ್ಥಿಗಳು ಜಾತಿ, ಮತ, ಪಂಥ, ಧರ್ಮಗಳ ಭೇದವಿಲ್ಲದೆ ಸಂಸ್ಕೃತಾಧ್ಯಯನವನ್ನು ಮಾಡುತ್ತಿದ್ದಾರೆಂದರೆ ಎಂಥವರಿಗೂ ಆಶ್ಚರ್ಯವಾಗದಿರದು. ಇದಕ್ಕೆ ಕಾರಣ ಪರಮಪೂಜ್ಯ ಸ್ವಾಮೀಜಿಯವರಿಗಿರುವ ಸಂಸ್ಕೃತ ಭಾಷೆಯ ಮೇಲಿನ ಪ್ರೀತಿ-ಪ್ರೇಮಗಳು.

ಸಿದ್ಧಗಂಗಾ ಮಠಕ್ಕೆ ಆಶ್ರಯ ಬಯಸಿ ಬರುವ ಪ್ರತಿಯೊಬ್ಬ ವಿದ್ಯಾರ್ಥಿಯೂ ಕಡ್ಡಾಯವಾಗಿ ಸಂಸ್ಕೃತಾಧ್ಯಯನವನ್ನು ಮಾಡಲೇ ಬೇಕು. ಆರಂಭದಲ್ಲಿ ಮಠದ ನಿಯಮಾವಳಿಗಳ ಪಾಲನೆಗೋಸ್ಕರ ಸಂಸ್ಕೃತ ಪಾಠಶಾಲೆಗೆ ಹೋಗುವ ವಿದ್ಯಾರ್ಥಿಗಳು ಕಾಲಾನಂತರದಲ್ಲಿ ಭಾಷೆಯ ಬಗ್ಗೆ ಪ್ರೀತಿ-ಅಭಿಮಾನ ಬೆಳೆದು ಆಸಕ್ತಿಯಿಂದ ಸಂಸ್ಕೃತಾಧ್ಯಯನವನ್ನು ಮಾಡುವಂತಾಗುತ್ತಾರೆ. ಅಂತಹ ಬದಲಾವಣೆಗೆ ಕಾರಣವೇನೆಂದರೆ ಸಂಪ್ರದಾಯಕ್ರಮದಲ್ಲಿ ಪಾಠ-ಪ್ರವಚನಗಳ ಬೋಧನೆ ಹಾಗೂ ಪಠ್ಯಕ್ರಮದಲ್ಲಿ ಅಳವಡಿಸಿರುವ ವಿಷಯಗಳ ರೋಚಕತೆ, ನೀತಿಶತಕ, ಸುಭಾಷಿತಗಳು, ಪಂಚತಂತ್ರ, ಹಿತೋಪದೇಶಾದಿ ನೀತಿಕಥೆ ಮುಂತಾದವುಗಳು ಎಳೆಯ ಮನಸ್ಸಿನ ಮಕ್ಕಳನ್ನು ಸೂಜಿಗಲ್ಲಿನಂತೆ ಆಕರ್ಷಿಸುತ್ತವೆ.

ಶ್ರೀಮಠದಲ್ಲಿ ಸಂಸ್ಕೃತಾಧ್ಯಯನ ಕಡ್ಡಾಯವಾಗಿರುವಂತೆ ಪ್ರತಿನಿತ್ಯ ಪ್ರಾತಃಕಾಲ ಹಾಗೂ ಸಾಯಂಕಾಲ ನಡೆಯುವ ಸಾಮೂಹಿಕ ಪ್ರಾರ್ಥನೆಯೂ ಅಷ್ಟೇ ಕಡ್ಡಾಯ. ಆ ದೃಶ್ಯವನ್ನು ನೋಡಲು ಹಾಗೂ ಕೇಳಲು ಸಾವಿರ ಕಣ್ಣು-ಕಿವಿಗಳೂ ಸಾಲದೇನೋ ಎನಿಸದಿರದು. ಶ್ರೀಮಠದ ಪ್ರತಿಯೊಬ್ಬ ವಿದ್ಯಾರ್ಥಿಯೂ ಬಿಳಿಪಂಚೆ ಹಾಗೂ ಮೈಮೇಲೆ ಕೆಂಪು ವಸ್ತ್ರ ಹೊದ್ದು, ಹಣೆಯ ತುಂಬಾ ಭಸ್ಮಧಾರಣೆ ಮಾಡಿಕೊಂಡು ತಪ್ಪದೆ ಪ್ರಾರ್ಥನೆಗೆ ಹಾಜರಾಗಲೇಬೇಕು. ಮಠದ ಮುಂಭಾಗದಲ್ಲಿ ನಡೆಯುವ ಪ್ರಾರ್ಥನೆಯ ದಿವ್ಯಸಾನ್ನಿಧ್ಯ ಪರಮಪೂಜ್ಯ ಮಹಾಸ್ವಾಮಿಗಳವರದೇ ಎಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಪ್ರಾರ್ಥನೆಯು ಭಗವದ್ಗೀತೆ ಮುಂತಾದ ಸಂಸ್ಕೃತ ಧರ್ಮಗ್ರಂಥಗಳಿಂದ ಆರಂಭವಾಗಿ ನಿಜಗುಣ ಶಿವಯೋಗಿಗಳ ***'ಜ್ಯೋತಿ ಬೆಳಗುತಿದೆ ವಿಮಲಪರಂಜ್ಯೋತಿ ಬೆಳಗುತಿದೆ.....'*** ಎಂಬ ಮಂಗಳದೊಂದಿಗೆ ಮುಕ್ತಾಯವಾಗುತ್ತದೆ. ಸಾಮೂಹಿಕ ಪ್ರಾರ್ಥನೆಯ ಶ್ಲೋಕಗಳನ್ನು ಪರಮಪೂಜ್ಯ ಸ್ವಾಮೀಜಿಯವರೇ ರಾಗಬದ್ಧವಾಗಿ, ಭಾವನಾತ್ಮಕವಾಗಿ ಹೇಳಿಕೊಡುವುದು ಪ್ರಾರ್ಥನೆಗೆ ವಿಶೇಷ ಕಳೆಯನ್ನು ಕಟ್ಟುತ್ತದೆ.

ಪ್ರಾರ್ಥನೆಯ ನಂತರ ಶ್ರೀಗಳವರು ಸುಮಾರು ೧೦-೧೫ ನಿಮಿಷಗಳ ಕಾಲ ಮಕ್ಕಳನ್ನು ಉದ್ದೇಶಿಸಿ ಆಶೀರ್ವಚನವನ್ನು ಅನುಗ್ರಹಿಸುವುದು ಆ ಮಕ್ಕಳ ಸುಕೃತವೇ ಸರಿ. ಶ್ರೀಗಳು ತಮ್ಮ ಆಶೀರ್ವಚನಾಗ್ರಹದಲ್ಲಿ ಮಕ್ಕಳ ಮನಸ್ಸಿಗೆ ವಿಷಯ ನಾಟುವಂತೆ ಮಾಡಲು ರಾಮಾಯಣ, ಮಹಾಭಾರತ, ಪುರಾಣ, ಗೀತೆ, ಪಂಚತಂತ್ರ, ಹಿತೋಪದೇಶ, ನೀತಿಶತಕಾದಿ ಸಂಸ್ಕೃತ ಶ್ಲೋಕಗಳನ್ನು ಉಲ್ಲೇಖಿಸಿ, ಅವುಗಳ ಸರಳಾನುವಾದವನ್ನು ಕನ್ನಡದಲ್ಲಿ ಹೇಳುವುದರ ಮೂಲಕ ಸಂಸ್ಕೃತಾಧ್ಯಯನ ಮಾಡುತ್ತಿರುವ ಮಕ್ಕಳಿಗೆ, ಸಂಸ್ಕೃತದ ವಿಷಯದಲ್ಲಿ ಇನ್ನೂ ಹೆಚ್ಚಿನ ಉತ್ಸಾಹವು ಉಂಟಾಗುವಂತೆ ಮಾಡುತ್ತಾರೆ. ಸ್ವಾಮೀಜಿಯವರ ಈ ಬಗೆಯ ಸಂಸ್ಕೃತ ಪ್ರೀತಿಯ ದ್ಯೋತಕವಾಗಿ ಸಿದ್ಧಗಂಗೆಯ ಸಂಸ್ಕೃತ ಮಹಾಪಾಠಶಾಲೆ ಜಗತ್ತಿನಲ್ಲಿಯೇ ಅತಿದೊಡ್ಡ ಸಂಸ್ಕೃತ ಮಹಾಪಾಠಶಾಲೆಯಾಗಿ ನಿಂತಿದೆ.

ಸಿದ್ಧಗಂಗೆಯ ಸಂಸ್ಕೃತ ಕಾಲೇಜಿನಲ್ಲಿ ಸಂಸ್ಕೃತಾಭ್ಯಾಸದ ಜೊತೆಗೆ ಸಂಸ್ಕೃತಕ್ಕೆ ಸಂಬಂಧಿಸಿದ ಅನೇಕ ಕಾರ್ಯಕ್ರಮಗಳು ವರ್ಷವಿಡೀ ನಡೆಯುತ್ತವೆ. ಅವುಗಳಲ್ಲಿ ಮುಖ್ಯವಾದವುಗಳೆಂದರೆ ಅಂತ್ಯಾಕ್ಷರೀ ಸ್ಪರ್ಧೆ, ಆಶುಭಾಷಣ, ನಾಟಕ, ಪ್ರಬಂಧ...... ವಿದ್ವತ್ ಮಟ್ಟದ ವಿದ್ಯಾರ್ಥಿಗಳಲ್ಲಿ ವಾಕ್ಯಾರ್ಥ ಸ್ಪರ್ಧೆ ಮುಂತಾದವುಗಳು ಆಯೋಜಿತವಾಗುತ್ತವೆ. ಸಂಸ್ಕೃತ ಮಹಾಪಾಠಶಾಲೆಯ ಪಠ್ಯೇತರ ಚಟುವಟಿಕೆಗಳ ಸಮಾರೋಪ ಸಮಾರಂಭ ಪ್ರತಿವರ್ಷವೂ ಜರುಗುತ್ತದೆ. ಆ ಸಮಾರಂಭದಲ್ಲಿ ನಡೆಯುವ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಮುಖ್ಯವಾದದ್ದು ಸಂಸ್ಕೃತ ನಾಟಕ ಪ್ರದರ್ಶನ. ದಿವ್ಯ ಸಾನ್ನಿಧ್ಯ ವಹಿಸಿರುವ ಶ್ರೀಗಳವರು ನಾಟಕ ವೀಕ್ಷಣೆಯ ಕಾಲದಲ್ಲಿ ತನ್ಮಯರಾಗುತ್ತಿದ್ದುದಲ್ಲದೆ ವಿದೂಷಕನಂತಹ ಹಾಸ್ಯಪಾತ್ರಧಾರಿಗಳ ಸಂಭಾಷಣೆಯನ್ನು ಕೇಳಿ ಬಿದ್ದು ಬಿದ್ದು ನಗುತ್ತಿದ್ದುದನ್ನು ಕಂಡಿರುವ ೩೦ ವರ್ಷಗಳ ನನ್ನ ನೆನಪು ಇನ್ನೂ ಮಾಸಿಲ್ಲ. ನಾಟಕದ ನಂತರ ಎಳೆಯ ವಯಸ್ಸಿನ ಮಕ್ಕಳಿಗೆ ಅರ್ಥವಾಗದ ನಾಟಕದ ಹಂದರವನ್ನು ಸ್ವಾರಸ್ಯಕರವಾಗಿ ಹೇಳಿ, ಅವರನ್ನೂ ರಂಜಿಸುತ್ತಿದ್ದರು.

ಸಂಸ್ಕೃತ ಪ್ರೇಮಿಗಳಾದ ಪರಮಪೂಜ್ಯ ಸ್ವಾಮೀಜಿಯವರಿಗೆ ಸಂಸ್ಕೃತ ವಿದ್ವಾಂಸರೆಂದರೆ ವಿಶೇಷ ಆದರ-ಗೌರವ. ಲಿಂ. ವಿದ್ವಾನ್ ಸಿ.ಎಂ. ರುದ್ರಾರಾಧ್ಯ ಶರ್ಮ, ವಿದ್ವಾನ್ ವೈ. ವಿಶ್ವನಾಥ ಶಾಸ್ತ್ರಿಗಳು, ವಿದ್ವಾನ್



ಉದ್ದಂಡ ಭಟ್ಟರು, ವಿದ್ವಾನ್ ಕೆ.ಎಸ್. ಶಿವನಂಜಯ್ಯ, ವಿದ್ವಾನ್ ಬಿ. ಗಂಗಪ್ಪನವರು ಮೊದಲಾದ ಶ್ರೇಷ್ಠ ವಿದ್ವಜ್ಜನರ ಪಡೆಯೇ ಅಲ್ಲಿದ್ದು, ಭೋಜರಾಜನ ಆಸ್ಥಾನವನ್ನು ನೆನಪಿಗೆ ತರುವಂತಿತ್ತು. ಗಣೇಶೋತ್ಸವದ ಸಂದರ್ಭದಲ್ಲಿ ಪ್ರತಿನಿತ್ಯ ಸಾಯಂಕಾಲ ನಡೆಯುತ್ತಿದ್ದ ಕಾರ್ಯಕ್ರಮಗಳಲ್ಲಿ ಈ ವಿದ್ವಾಂಸರುಗಳಿಂದ ವೇದ-ವೇದಾಂತ, ಇತಿಹಾಸ-ಪುರಾಣ, ಕಾವ್ಯ-ನಾಟಕಾದಿಗಳಲ್ಲಿ ನಿರೂಪಿತವಾಗಿರುವ ವಿನಾಯಕನಿಗೆ ಸಂಬಂಧಿಸಿದ ಪ್ರವಚನಗಳು ನಡೆಯುತ್ತಿದ್ದವು. ಶ್ರೀಗಳು ಆ ಕಾರ್ಯಕ್ರಮಗಳೆಲ್ಲ ತಪ್ಪದೆ ಹಾಜರಿದ್ದು, ವಿದ್ವಾಂಸರ ವಿದ್ವತ್ತನ್ನು ಪ್ರಶಂಸಿಸಿ, ಸನ್ಮಾನಿಸುತ್ತಿದ್ದರು. ಇದು ಸ್ವಾಮೀಜಿಯವರಿಗಿದ್ದ ಸಂಸ್ಕೃತ ಭಾಷೆಯ ಮೇಲಿನ ಪ್ರೀತಿ-ಪ್ರೇಮಗಳಲ್ಲದೆ ಮತ್ತೇನು ?

ಸಂಸ್ಕೃತಾಧ್ಯಯನ-ಅಧ್ಯಾಪನಗಳು ಶ್ರೀಮಠದ ವಿದ್ಯಾರ್ಥಿಗಳಿಗೆ ಮಾತ್ರ ದೊರಕುವಂತಾಗದೆ, ಗ್ರಾಮಾಂತರ ಪ್ರದೇಶದ ಮಕ್ಕಳಿಗೂ ನಮ್ಮ ಸಂಸ್ಕೃತಿಯ ಪರಿಚಯವಾಗಬೇಕೆಂಬ ಉದ್ದೇಶದಿಂದ ೨೦ಕ್ಕೂ ಹೆಚ್ಚು ಸಂಸ್ಕೃತ ಪಾಠಶಾಲೆಗಳನ್ನು ತೆರೆದು, ಗ್ರಾಮೀಣ ಮಕ್ಕಳಿಗೂ ಸಂಸ್ಕೃತ ಶಿಕ್ಷಣ ದೊರಕುವಂತೆ ಮಾಡಿದ್ದಾರೆ.

ಶ್ರೀಕ್ಷೇತ್ರದಲ್ಲಿರುವ ಸಂಸ್ಕೃತ ಕಾಲೇಜಿಗೆ ಹೊಂದಿಕೊಂಡಂತೆ ಭವ್ಯವಾದ ಗ್ರಂಥಾಲಯವಿದ್ದು, ಅದರಲ್ಲಿ ವೇದ-ವೇದಾಂತ, ರಾಮಾಯಣ-ಮಹಾಭಾರತ, ಪುರಾಣಗಳು, ಆಗಮ, ತಂತ್ರಶಾಸ್ತ್ರ, ದ್ವೈತಾದ್ವೈತ-ವಿಶಿಷ್ಟಾದ್ವೈತ-ಶಕ್ತಿ ವಿಶಿಷ್ಟಾದ್ವೈತ ದರ್ಶನ, ಕಾವ್ಯ, ನಾಟಕಾದಿಗಳಿಗೆ ಸಂಬಂಧಿಸಿದ ೧೫,೦೦೦ ಕ್ಕೂ ಸಂಸ್ಕೃತ ಗ್ರಂಥಗಳೂ, ನೂರಾರು ಹಸ್ತಪ್ರತಿಗಳೂ ಇವೆ. ಹಸ್ತಪ್ರತಿಗಳ ಅಧ್ಯಯನ, ಸಂಶೋಧನೆ, ಪ್ರಕಟಣೆಗಳು ಆರಂಭವಾಗಿದ್ದು, ಗ್ರಂಥಭಂಡಾರದಲ್ಲಿದ್ದ ಸೋಸಲೆ ರೇವಣಾರಾಧ್ಯನ ಟೀಕೆಯೊಂದಿಗೆ ಶಿವಯೋಗಿ ಶಿವಾಚಾರ್ಯಕೃತ ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥವನ್ನು ವಿದ್ವಾನ್ ಸಿದ್ಧಗಂಗಪ್ಪನವರು ಸಂಪಾದಿಸಿದ್ದು, ಪರಮಪೂಜ್ಯ ಸ್ವಾಮೀಜಿಯವರು ಆ ಗ್ರಂಥವನ್ನು ದಿನಾಂಕ ೧೭-೦೨-೨೦೦೫ ರಂದು ಲೋಕಾರ್ಪಣೆ ಮಾಡಿದುದನ್ನು ಈ ಸಂದರ್ಭದಲ್ಲಿ ಸ್ಮರಿಸಬಯಸುತ್ತೇನೆ.

ಸಂಸ್ಕೃತ ಭಾಷೆ-ಸಾಹಿತ್ಯಗಳ ಆಳ-ಅಗಲ-ವಿಸ್ತಾರಗಳನ್ನು ಸೂಕ್ಷ್ಮವಾಗಿ ಬಲ್ಲ ಶ್ರೀಗಳವರ ಅಭಿಪ್ರಾಯದಲ್ಲಿ ಸನ್ಯಾಸಿಗಳಿಗೆ, ಮಠಾಧಿಪತಿಗಳಿಗೆ ಸಂಸ್ಕೃತ ಭಾಷಾಜ್ಞಾನ ಅತ್ಯವಶ್ಯ. ಏಕೆಂದರೆ ಭಾರತೀಯ ಧರ್ಮ-ದರ್ಶನಗಳ ಸಮಸ್ತ ಸಾಹಿತ್ಯವು ಸಂಸ್ಕೃತದಲ್ಲಿದೆ. ಮಠಾಧಿಪತಿಗಳಿಗೆ ಆ ಧರ್ಮಗ್ರಂಥಗಳ ಪರಿಚಯವಿದ್ದಲ್ಲಿ ಸಮಾಜದಲ್ಲಿ ಪದೇ ಪದೇ ಉಂಟಾಗುವ ಧರ್ಮ ಸಂಬಂಧಿ ಹತ್ತು-ಹಲವು ಸಮಸ್ಯೆಗಳನ್ನು ಸಮರ್ಥವಾಗಿ ನಿರ್ವಹಿಸಲು ಸಾಧ್ಯವಾಗುವುದಲ್ಲದೆ ಸ್ವಧರ್ಮ ನಿಷ್ಠೆ-ಪರಧರ್ಮ ಸಹಿಷ್ಣುತೆಗಳು ಬೆಳೆದು ಉತ್ತಮ ಸಮಾಜವನ್ನು ನಿರ್ಮಾಣ ಮಾಡಲು ಸಾಧ್ಯವಾಗುತ್ತದೆ. ಆದ್ದರಿಂದ ಶ್ರೀಮಠಕ್ಕೆ ವಿದ್ಯಾಭ್ಯಾಸಕ್ಕೆ ಆಗಮಿಸುವ ಅನೇಕ ಮರಿಸ್ವಾಮಿಗಳಿಗೆ ಹೆಚ್ಚು ಆಸಕ್ತಿಯಿಂದ ಸಂಸ್ಕೃತಾಧ್ಯಯನ ಮಾಡಿ ಜ್ಞಾನಾರ್ಜನೆ ಮಾಡುವಂತೆ ಪರಮಪೂಜ್ಯರು ಕಟ್ಟುನಿಟ್ಟಿನ ಆಜ್ಞೆ ಮಾಡಿರುತ್ತಾರೆ.

ದಿನಾಂಕ ೧೫-೧೦-೧೯೭೮ ರಿಂದ ೧೫-೧೦-೧೯೭೮ ರವರೆಗೆ ಮೂರು ದಿನಗಳ ಕಾಲ ಅಖಿಲ ಕರ್ನಾಟಕ ಸಂಸ್ಕೃತ ಪರಿಷತ್ತಿನ ದ್ವಿತೀಯ ಸಮ್ಮೇಳನವನ್ನು ಶ್ರೀಕ್ಷೇತ್ರದಲ್ಲಿ ಆಯೋಜಿಸುವುದರ ಮೂಲಕ ಸ್ವಾಮೀಜಿಯವರು ಸಮಸ್ತ ಕರ್ನಾಟಕದ ಶ್ರೇಷ್ಠ ವಿದ್ವಾಂಸರ ಗೌರವ-ಮನ್ನಣೆಗಳಿಗೆ ಪಾತ್ರರಾದರು. ಸಮ್ಮೇಳನ ವ್ಯವಸ್ಥೆಯ ಬಗ್ಗೆ ಪರಮಪೂಜ್ಯರು ತಳೆದಿದ್ದ ಶ್ರದ್ಧೆ-ನಿಷ್ಠೆ-ಆತಿಥ್ಯಾದಿಗಳನ್ನು ಕಂಡ ಸಮಸ್ತ ವಿದ್ವಾಂಸರು ಮೂಕರಾದರು. ಆ ಸಮ್ಮೇಳನದಲ್ಲಿ ಪ್ರತಿದಿನ ಸಂಜೆ ಅನೇಕ ಮನೋರಂಜನಾ ಕಾರ್ಯಕ್ರಮಗಳನ್ನು ಆಯೋಜಿಸುವುದರ ಮೂಲಕ ವಿದ್ವಾಂಸರಿಗೆ ರಸದೌತಣವನ್ನು ಉಣಬಡಿಸಿದ್ದನ್ನು ಭಾಗವಹಿಸಿದ್ದ ಅನೇಕ ವಿದ್ವಾಂಸರು ಇಂದೂ ಸ್ಮರಿಸುತ್ತಿರುವುದು ಸ್ವಾಮೀಜಿಯವರ ಸಂಸ್ಕೃತ ಭಾಷಾಪ್ರೇಮದ ಪ್ರತೀಕಗಳಾಗಿವೆ.

ಸ್ವಾತಂತ್ರ್ಯಪೂರ್ವ-ಸ್ವಾತಂತ್ರ್ಯಾನಂತರದ ಭಾರತ ದೇಶದಲ್ಲಿ ಸಂಸ್ಕೃತಾಧ್ಯಯನ-ಅಧ್ಯಾಪನ, ಶ್ರವಣ-ಮನನಾದಿಗಳು ಸಾರ್ವತ್ರಿಕವಾಗಿರಲಿಲ್ಲವೆಂಬುದು ಸೂರ್ಯ-ಚಂದ್ರರಷ್ಟೆ ಸತ್ಯ. ಉಚ್ಚ ವರ್ಗದ ಜನಗಳು ಸಂಸ್ಕೃತವನ್ನು ಮಡಿ ಭಾಷೆ ಎಂದು ಹೇಳುತ್ತಾ ಶೂದ್ರ ಜಾತಿಯಲ್ಲಿ ಜನಿಸಿದ ವ್ಯಕ್ತಿ ವೇದಾಧ್ಯಯನ ಮಾಡುವುದಿರಲಿ, ಶ್ರವಣ ಮಾಡುವುದೂ ಮಹಾಪಾಪ ಎಂಬ ಕಾಲದಲ್ಲಿ ಜಾತಿ, ಮತ, ಪಂಥ, ಧರ್ಮಗಳ ತಾರತಮ್ಯವಿಲ್ಲದೆ ವಿಪ್ರ ಮೊದಲು ಅಂತ್ಯಜ ಕೊನೆಯಾಗಿ ಎಲ್ಲರೂ ಒಟ್ಟಿಗೆ ಕುಳಿತು ಸಂಸ್ಕೃತಾಧ್ಯಯನವನ್ನು ಮಾಡುವಂತಹ ಅವಕಾಶವನ್ನು ಮಾಡಿಕೊಟ್ಟಂತಹ







ಮೊಟ್ಟ ಮೊದಲನೆಯ ಮಠಾಧಿಪತಿಗಳೆಂದರೆ ಸಿದ್ಧಗಂಗೆಯ ಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು. ಸ್ವಾಮೀಜಿಯವರ ಕೃಪಾಶ್ರಯದಲ್ಲಿ ಸಂಸ್ಕೃತಾಧ್ಯಯನ ಮಾಡಿದ ಎಷ್ಟೋ ಜನ ಉನ್ನತ ಶಿಕ್ಷಣದ ಜೊತೆಗೆ ವಿಶ್ವವಿದ್ಯಾಲಯಗಳಿಂದ ಡಾಕ್ಟರೇಟ್ ಪದವಿಗಳನ್ನು ಪಡೆದು, ನಾಡಿನಾದ್ಯಂತ ಸಂಸ್ಕೃತ ಸಾಹಿತ್ಯದ ಅಧ್ಯಯನ, ಅಧ್ಯಾಪನ, ಸಂಶೋಧನೆಗಳನ್ನು ಕೈಗೊಂಡು ಶ್ರೀಗಳವರಿಗೆ, ಶ್ರೀಕ್ಷೇತ್ರಕ್ಕೆ ಚಿರಋಣಿಗಳಾಗಿದ್ದಾರೆ. ನಮ್ಮ ಮಧ್ಯೆ ಸಾಕ್ಷಾತ್ ಭಗವಂತನ ಅಪರಾವತಾರದಂತಿರುವ ಪರಮಪೂಜ್ಯರಿಗೆ ದೇವವಾಣಿಯೆಂಬ ಅಪರ ನಾಮಾಂಕಿತವುಳ್ಳ ಸಂಸ್ಕೃತ ಭಾಷೆಯ ಬಗ್ಗೆ ಇರುವ ಶ್ರದ್ಧೆ-ನಿಷ್ಠೆ, ಪ್ರೀತಿ-ಪ್ರೇಮಗಳು ಇತರ ಮಠಾಧಿಪತಿಗಳಿಗೆ ಮಾದರಿಯಾಗಿವೆ. ಪರಮಪೂಜ್ಯರ ಇಂತಹ ಉದಾತ್ತವಾದ ಧ್ಯೇಯೋದ್ದೇಶಗಳನ್ನು ಇತರ ಮಠಾಧಿಪತಿಗಳೂ ಅನುಸರಿಸುತ್ತಿದ್ದು ತಮ್ಮ ಮಠಗಳಲ್ಲಿ ಸಂಸ್ಕೃತ ಪಾಠಶಾಲೆಗಳನ್ನು ತೆರೆದು ಸಂಸ್ಕೃತ ಭಾಷಾ ಪ್ರೇಮವನ್ನು ವ್ಯಕ್ತಪಡಿಸುತ್ತಿದ್ದಾರೆ. ಆಂಗ್ಲಭಾಷೆಯ ಮೇಲಿನ ವ್ಯಾಮೋಹದ ಹುಚ್ಚು ಹೊಳೆಯಲ್ಲಿ ಎಲ್ಲ ಭಾಷೆಗಳು ಕೊಚ್ಚಿ ಹೋಗುತ್ತಿದ್ದರೂ ಸಂಸ್ಕೃತ ಭಾಷೆಯ ಅಧ್ಯಯನ-ಅಧ್ಯಾಪನಾದಿಗಳು ಇನ್ನೂ ಪ್ರಚಲಿತವಿರುವುದು ವೀರಶೈವ ಮಠಗಳಿಂದಲೇ ಅದರಲ್ಲೂ ವಿಶೇಷವಾಗಿ ಸಿದ್ಧಗಂಗಾ ಮಠದಿಂದಲೇ ಎಂದರೆ ತಪ್ಪಾಗಲಾರದು. ಇದಕ್ಕೆಲ್ಲ ಮೂಲಕಾರಣ ಪರಮಪೂಜ್ಯ ಸ್ವಾಮೀಜಿಯವರಿಗೆ ಆ ಭಾಷೆಯ ಮೇಲಿರುವ ಪ್ರೀತಿ-ಪ್ರೇಮಗಳೇ ಕಾರಣ. ಹೀಗೆ ಎಲ್ಲ ಭಾರತೀಯ ಭಾಷೆಗಳಿಗೆ ಜನನಿಯೋಪಾದಿಯಲ್ಲಿರುವ ದೇವವಾಣಿಯ ಪಾಲಕರೂ-ಪೋಷಕರೂ ಆದ ಪರಮಪೂಜ್ಯ ಸ್ವಾಮೀಜಿಯವರು ಜಗದ್ವಂದ್ಯರಾಗಿದ್ದು, ಆಧುನಿಕ ಕುಲಪತಿಗಳೆನಿಸಿದ್ದಾರೆ.



ಮನುಷ್ಯ ಮನುಷ್ಯನಾಗಿ
ಬದುಕುವ ಕಲೆ ಕಲಿಸಿಕೊಟ್ಟವರು
ಬಸವಣ್ಣನವರು. ಅವರು
ತೋರಿದ ಬೆಳಕಿನಲ್ಲಿ ನಡೆದರೆ
ಬದುಕು ಸಾರ್ಥಕವಾಗುತ್ತದೆ.

ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು

## ನಡೆದಾಡೋ ದೇವರಿಗೆ

ಲಕ್ಷ ಲಕ್ಷ ಜನಮನದಲಿ...
ಹಸಿರಾಗಿ ನಿಂತ ಗುರುವೇ,
ರೂಕ್ಷ ರೂಕ್ಷ ಗುಣ ಗಣವನು
ರೂಪಿಸಿದ ಸಿರಿ ವರವೇ...
ನಿಮಗೆ ನಮ್ಮ ನಮನ
ಭಕ್ತಿಪೂರ್ವಕ ಕವನ !

ಮೌಢ್ಯ ತುಂಬಿದ ಹಳ್ಳಿಗಾಡಿಗೆ
ಜ್ಞಾನದ ಬೆಳಕ ಹರಿಸಿದ ಗುರುವೇ...
ಎಂದೆಂದೂ ನಮ್ಮ ಪಾಲಿಗೆ
ನೀವು ನಡೆದಾಡುವ ನಿಜ ದೈವವೇ !
ನೀವೇ ನಮ್ಮ ರೂವಾರಿ
ಸದಾ ಚೈತನ್ಯ ವಲ್ಲರಿ !
ನೀವೇ ಸಂಸ್ಕೃತಿ ಸದಾಚಾರಿ
ನಿಮ್ಮಿಂದ ನಮಗೆ ಜ್ಞಾನದೈಸಿರಿ !
ನಿಮಗೆ ನಮ್ಮ ನಮನ
ಇದೋ ನಲ್ಮೆಯ ಗುಣಗಾನ !

ಶಾಲೆಗಳಿರದ ಬರದ ಬೀಡಿಗೆ
ಜ್ಞಾನ ಗಂಗೆಯ ತಂದ ಗುರುವೇ,
ಧರ್ಮ ತುಂಬಿದ ನಮ್ಮ ನಾಡಿಗೆ
ನೀವು ಜೀವಂತ ಸಿರಿ ವಿಭುವೇ !

ದಾಸೋಹ ನಿಮ್ಮ ಕಾಯಕ
ಜ್ಞಾನಾಮೃತ ನೀಡೋ ಚಿಂತಕ,
ನೀವೇ ಅಕ್ಕರೆ ನಾಡೋಜ
ಸಿದ್ಧಗಂಗೆಯ ಸೂರ್ಯತೇಜ !
ನಿಮಗೆ ನಮ್ಮ ನಮನ
ಇದೋ ಭಕ್ತಿಯ ಅಭಿನಂದನ

– ಡಾ|| ದೊಡ್ಡರಂಗೇಗೌಡ







ಲೇಖನ

# ಬದುಕಿದೆನು ಕಾಣಾ !

– ಡಾ. ಗೊ.ರು. ಚನ್ನಬಸಪ್ಪ *



ಒಬ್ಬಳು ಆದಿಯುಗದಲ್ಲಿ ಮಾಯಾಂಗನೆ
ಹಲವು ಬಣ್ಣದ ವಸ್ತ್ರವನುಟ್ಟುಕೊಂಡು
'ಓ ದೇವರಕೊಳ್ಳಿರಯ್ಯಾ, ಓ ದೇವರ ಕೊಳ್ಳಿರಯ್ಯಾ'
ಎಂದರೆ, ಆ ದೇವರನಾರೂ ಕೊಂಬವರಿಲ್ಲ
ನಾನು ಒಂದರುವೆಯ ಕೊಟ್ಟು, ಆ ದೇವರಕೊಂಡು
ಎನ್ನ ಹೆತ್ತ ತಂದೆ ಬಸವಣ್ಣನ ಪ್ರಸಾದದಿಂದ
ಬದುಕಿದೆನು ಕಾಣಾ ಕಲಿದೇವರ ದೇವಾ !

ಹನ್ನೆರಡನೆಯ ಶತಮಾನದ ಮಡಿವಾಳ ಮಾಚಿತಂದೆಯ ಈ ನುಡಿ ಗೌರವದ ಕಾರಣಪುರುಷ ಬಸವಣ್ಣನವರ ಜಯಂತಿಯನ್ನು ಎಲ್ಲ ಕಡೆ ಆಚರಿಸುತ್ತಿದ್ದೇವೆ. ಈ ನೆಪದಲ್ಲಾದರೂ ಆ ಜೀವನ ಜ್ಯೋತಿಯ ಸ್ಮರಣೆಯನ್ನು ಜೀವಂತವಾಗಿ ಇಟ್ಟಿದ್ದೇವೆಂಬುದೇ ಒಂದು ಸಮಾಧಾನ.

ಹನ್ನೆರಡನೆಯ ಶತಮಾನದಲ್ಲಿ ಸೃಷ್ಟಿಯಾದ ವಚನೋಧ್ಯಾನದ ವಿಚಾರ ಫಲವೃಕ್ಷಗಳಲ್ಲಿ ಕಾಣಸಿಗುವ ಒಂದು ಮಾಗಿದ ಫಲ – "ಬದುಕಿದೆನು ಕಾಣಾ" ಎನ್ನುವ ಸೂಳ್ನುಡಿ. ಇದು ನೋಟಕ್ಕೆ ಸರಳವೆಂಬಂತೆ ಕಂಡರೂ ಶರಣ ಮಾರ್ಗಕ್ಕೆ ಮಾತ್ರ ಸನ್ನಿಹಿತವಾದ ಅವಿರಳ ಅನುಭಾವವ ನುಡಿ. ವಚನ ಸಾಹಿತ್ಯದಲ್ಲಿ ವಿಫುಲವಾಗಿ ದೊರೆಯುವ ಈ ಮಾತು ಕೇವಲ ಪದ ಸಮುಚ್ಚಯವಲ್ಲ. ಜೀವನದ ಪರಿಪೂರ್ಣತೆಯನ್ನು ಸಂಕೇತಿಸುವ ಪದ ಸಮುಚ್ಚಯ. ಇದರ ಗೊತ್ತು ಇರುವುದು ಸಾಮಾನ್ಯ ಅನುಭಾವದಲ್ಲಲ್ಲ; ಅಸಾಮಾನ್ಯ ಅನುಭಾವದಲ್ಲಿ.

ಈ ಮಾತಿಗೆ 'ಸೂಳ್ನುಡಿ' ಎಂದಿದ್ದೇನೆ. ಸೂಳ್ನುಡಿ ಎಂದರೆ ತತ್ತ್ವಜ್ಞಾನದ ಮಾತು. ಆ ಮಾತಿನಲ್ಲಿ ತುಂಬಿಕೊಂಡಿರುವ ಅನುಭವಾಮೃತದ ಸತ್ಯ-ಸತ್ವಗಳಿಗೆ, ಘನತೆ, ಗಾಂಭೀರ್ಯಗಳಿಗೆ ಅರ್ಥನೀಡಲು ಪ್ರಯತ್ನಿಸುವ ನನ್ನ ಯಾವ ಮಾತೂ ನೀರಸವೆನಿಸಬಹುದು. ಆದ್ದರಿಂದ ನಾವು ನೇರವಾಗಿ ವಚನೋಧ್ಯಾನಕ್ಕೇ ಹೋಗಿ ಆ ರಸಾನುಭವವನ್ನು ಪಡೆಯ ಬೇಕಾಗುತ್ತದೆ.

**'ನಿಮ್ಮಿಂದ ಬದುಕಿದೆನು'** ಎಂಬ ಮಾತು ಅನೇಕ ಶರಣರ ಬಾಯಲ್ಲಿ ಬಂದಿದೆ. ಈ ಮಾತು ಸದುವಿನಯದ ಸದಭಿವ್ಯಕ್ತಿ. ಅನನ್ಯವಾದ ಅನುಭಾವೋಕ್ತಿ. ಇದು ಲೋಕ ವ್ಯವಹಾರದ ಒಂದು ಔಪಚಾರಿಕ ಮಾತಲ್ಲ. ಅರಿತು ಅನುಭಾವಿಸಿದವರ ಕೃತಜ್ಞತೆಯ ನುಡಿ. ಸಜ್ಜನಿಕೆಯ ಸಂಸ್ಕೃತಿ ನುಡಿ. ಮಾತೆಂಬ ಜ್ಯೋತಿರ್ಲಿಂಗ ! ಅದರ ಬೆಳಗಿನ ಅನುಭಾವ ಅನಿರ್ವಚನೀಯ. ಅಂತರಂಗಕ್ಕೆ ಮಾತ್ರ ಅದರ ದಿವ್ಯದರ್ಶನ ! ಈ ದರ್ಶನಕ್ಕಾಗಿ, ನಮ್ಮ ಶರಣ ತತ್ತ್ವಜ್ಞಾನದ ರಸಗಟ್ಟಿಯಂತಿರುವ 'ಶೂನ್ಯ ಸಂಪಾದನೆ'ಯ ಪ್ರಾಂಗಣಕ್ಕೆ ಹೋಗಿ ಅಲ್ಲಿ ವ್ಯಾಖ್ಯಾನಗೊಂಡಿರುವ ಒಂದು ಪ್ರಸಂಗವನ್ನು ಅವಲೋಕಿಸೋಣ. ಅದು ಪ್ರಭುದೇವರ ಶೂನ್ಯ ಸಂಪಾದನೆಯಲ್ಲಿ ಬರುವ ಮರುಳಶಂಕರದೇವರ ಪ್ರಸಂಗ.

ಲೋಕ ಜಂಗಮ ಆತ್ಮಜ್ಞಾನಿ ಅಲ್ಲಮಪ್ರಭು ತನ್ನ ಸಂಚಾರ ಮಾರ್ಗದಲ್ಲಿ ಕಂಡ ಕರ್ಮಯೋಗಿ ಸಿದ್ಧರಾಮನನ್ನು ಶಿವಯೋಗಿ ಸಿದ್ಧರಾಮನನ್ನಾಗಿ ಪ್ರಮಾಣಿಸಲು ಅವನನ್ನು ಕಲ್ಯಾಣಕ್ಕೆ ಕರೆದುಕೊಂಡು ಬರುತ್ತಾನೆ. ಕಲ್ಯಾಣವೆಂದರೆ ಮತ್ತೆಲ್ಲಿ ಹೋಗುವುದು ? ಬಸವಣ್ಣನವರ ಮಹಾಮನೆಗೆ ಹೋಗಬೇಕು. ಅಲ್ಲಿಗೆ ಬಂದು ಮಹಾದ್ವಾರದಲ್ಲಿ ಅಲ್ಲಮಪ್ರಭು ಮತ್ತು ಸಿದ್ಧರಾಮ ನಿಂತಿರುವುದು ಲಿಂಗಪೂಜೆಯಲ್ಲಿ ನಿರತರಾಗಿದ್ದ ಬಸವಣ್ಣನವರಿಗೆ ತಿಳಿಯುತ್ತದೆ. ಅವರನ್ನು ಕರೆದುಕೊಂಡು ಬರಲು ಪರಿಚಾರಕರನ್ನು ಕಳುಹಿಸುತ್ತಾರೆ.

---

* ನಂ. ೪೦೬, 'ಪ್ರಣಾಮ' 'ಎಫ್' ರಸ್ತೆ, ೩ನೇ ಕ್ರಾಸ್, ಐಡಿಯಲ್ ಹೋಂ ಟೌನ್‌ಶಿಪ್, ರಾಜರಾಜೇಶ್ವರಿನಗರ, ಬೆಂಗಳೂರು-೫೬೦೦೯೮

ಅತಿಥಿಗಳನ್ನು ಕರೆಯ ಹೋದ ಹಡಪದಪ್ಪಣ್ಣ "ಶರಣ ಬಸವಣ್ಣನಟ್ಟಿದನು ಕೃಪೆ ಮಾಡು ಗುರುವೆ" ಎಂದು ಪ್ರಭುದೇವರಲ್ಲಿ ವಿನಯದಿಂದ ಬಿನ್ನವಿಸಿಕೊಳ್ಳುತ್ತಾನೆ. ಆದರೆ ಸುಲಭ ಸಾಧ್ಯನಲ್ಲದ ಆ ಜಂಗಮ ಅಷ್ಟು ಸುಲಭವಾಗಿ ಒಪ್ಪುತ್ತಾನೆಯೆ? "ಹಿರಿಯರು ಬಂದರೆ ಇದಿರೆದ್ದು ಬಾರದವರ ಮನೆಗೆ ಅಡಿಯಿಸೆವು" ಎಂದು ಹೇಳುತ್ತಾನೆ ಅಲ್ಲಮ. ಹಡಪದಪ್ಪಣ್ಣ ಹಿಂತಿರುಗಿ ಹೋಗಿ ಬಸವಣ್ಣನವರಲ್ಲಿ ವರದಿ ಮಾಡುತ್ತಾನೆ. ಅದಕ್ಕೆ ಬಸವಣ್ಣನವರು "ಭಕ್ತನ ಕಾಯವ ಧರಿಸಿದ ಜಂಗಮ ತನ್ನ ಮಠಕ್ಕೆ ತಾ ಬರಲು ಮುನಿಸುಂಟೆ" ಎಂದು ಹೇಳಿ ಹಡಪದಪ್ಪಣ್ಣನನ್ನು ಮತ್ತೆ ಕಳುಹಿಸುತ್ತಾರೆ.

ಆದರೇನು? ಪ್ರಭು "ಕಕ್ಕುಲತೆಗೆ ಅಶನವನುಂಡು, ವ್ಯಸನದ ಕಕ್ಕುಲತೆಗೆ ಹಣ ಬೇಡಿ, ಕೊಟ್ಟಡೆ ಕೊಂಡಾಡಿ, ಕೊಡದಿರ್ದಡೆ ದೂರಿಕೊಂಡು ಹೋಗುವ ಜಂಗಮನಲ್ಲ. ಬಂದ ಜಂಗಮದ ಇಂಗಿತವರಿಯದ, ನಿಂದ ನಿಲವನರಿಯದ ಅಹಂಕಾರಿಗಳ ಮನೆಗೆ ಬರಲಾಗದು" ಎಂದು ಮತ್ತಷ್ಟು ನಿಷ್ಠುರವಾಗಿ ನುಡಿಯುತ್ತಾನೆ. "ಬಸವಣ್ಣನ ಭಕ್ತಿ ತಲೆಕೆಳಗಾಗಿದೆ" ಎನ್ನುವಷ್ಟು ಕಠಿಣವಾಗಿ ಹೇಳುತ್ತಾನೆ.

ಈ ಅಟ್ಟಾಟಕೆಯಿಂದ ಅಲ್ಲಮನ ಪಟ್ಟು ಬಿಡಸಲಾಗದೆಂದು ಮನಗಂಡ ಹಡಪದಪ್ಪಣ್ಣ ಬಸವಣ್ಣನವರಿಗೆ 'ಎಮ್ಮ ನುಡಿ ನಿಮ್ಮ ಶರಣರ ತಾಗಬಲ್ಲುದೆ? ಅವರು ಎನ್ನ ಮಾತಿಂಗೆ ಬಾರರು. ನೀವೆ ಬಿಜಯಂಗೈಸಿಕೊಂಡು ಬರಬೇಕು" ಎನ್ನುತ್ತಾನೆ.

ಆಗ ಬಸವಣ್ಣನವರಿಗೆ ತಮ್ಮ ತಪ್ಪು ಅರಿವಾಯಿತು. ಅವರಲ್ಲಿ ಚೆನ್ನಬಸವಣ್ಣನೂ ಕರ್ತವ್ಯ ಪ್ರಜ್ಞೆ ಮೂಡಿಸಿದ. ಆಗ ಜಾಗೃತರಾದ ಬಸವಣ್ಣ "ನಾನು ನಿನ್ನ ಕೃಪೆಯಿಂದ ಬದುಕಿದೆನಯ್ಯಾ" ಎಂದು ಹೇಳಿ ಪ್ರಭುದೇವ ಮತ್ತು ಸಿದ್ಧರಾಮರನ್ನು ಸ್ವಾಗತಿಸಲು ತಾವೇ ಮಹಾದ್ವಾರದ ಬಳಿಗೆ ಬರುತ್ತಾರೆ. ಜೊತೆಯಲ್ಲಿ ಹಡಪದಪ್ಪಣ್ಣ, ಚೆನ್ನಬಸವಣ್ಣ, ಸೊಡ್ಡಳ ಬಾಚರಸ ಮೊದಲಾಗಿ ಅಸಂಖ್ಯಾತ ಮಹಾಗಣಂಗಳು ಇರುತ್ತಾರೆ.

ಪ್ರಭುವಿಗೆ ದೀರ್ಘದಂಡ ನಮಸ್ಕಾರ ಮಾಡಿದ ಬಸವಣ್ಣ ತಮ್ಮ ತಪ್ಪುಗಳನ್ನೆಲ್ಲ ಮನ್ನಿಸಿ ಮಹಾಮನೆಗೆ ದಯಮಾಡಿಸಬೇಕೆಂದು ಬಿನ್ನವಿಸಿಕೊಳ್ಳುತ್ತಾರೆ. ಆದರೆ ಪ್ರಭು ಒಮ್ಮೆಲೇ ಬಡಂಬಡುವ ಕುಳವಲ್ಲ. ಬಸವಣ್ಣ ಎಷ್ಟು ವಿಧದಲ್ಲಿ ಹೇಳಿಕೊಂಡರೂ ಮತ್ತೆ ಮತ್ತೆ ಒರೆಹಚ್ಚಿ ಬಸವ ಬೆಳಗನ್ನು ಪ್ರಕಾಶಿಸಿದ ನಂತರವೇ ಸಮ್ಮತಿಸುತ್ತಾನೆ. ಎಲ್ಲರೂ ಕೂಡಿಕೊಂಡು ಮಹಾದ್ವಾರವನ್ನು ಪ್ರವೇಶಿಸುತ್ತಾರೆ.

ಅವರು ಹಾಗೆ ಪ್ರವೇಶಿಸಿದ ಅಂಗಳದಲ್ಲಿದ್ದ ಮಹಾಮನೆಯ ಪ್ರಸಾದಕುಂಡ ಪ್ರಭುವಿನ ಕಣ್ಣಿಗೆ ಬೀಳುತ್ತದೆ. ಆ ಪ್ರಸಾದ ಕುಂಡದಲ್ಲಿ ಅದುವರೆಗೆ ಯಾರ ಗಮನಕ್ಕೂ ಬಾರದಿದ್ದ ಮರುಳಶಂಕರದೇವ ಆ ಕುಂಡದಿಂದ ಮೆಲ್ಲನೆ ಹೊರಗೆ ಬರುತ್ತಾನೆ. ಅದನ್ನು ಕಂಡು ಪ್ರಭು ಬಸವಣ್ಣವರ ಕಡೆಗೆ ತಿರುಗಿ "ನಿಮ್ಮ ಧರ್ಮದಿಂದಲೊಂದಾಶ್ಚರ್ಯವ ಕಂಡು ಬದುಕಿದೆನು ಕಾಣಾ ಸಂಗನಬಸವಣ್ಣ" ಎನ್ನುತ್ತಾನೆ. ಅದಕ್ಕೆ ಬಸವಣ್ಣ ನಿಮ್ಮಿಂದೊಂದಾಶ್ಚರ್ಯವಿಲ್ಲೆಂದು ಸ್ತುತಿ ಹೊಗಳುತ್ತಿರ ಲಾಗಿ, ನೀವು ಕಂಡ ಆಶ್ಚರ್ಯವಾವುದೆನ್ನಗೊಮ್ಮೆ ನಿರೂಪಿಸಾ ಪ್ರಭುವೆ" ಎಂದು ಬಿನ್ನವಿಸಿಕೊಳ್ಳುತ್ತಾರೆ.

ಆಗ ಪ್ರಭು "ಹನ್ನೆರಡು ವರ್ಷಗಳ ಕಾಲ ಗಣಪ್ರಸಾದದ ಕುಳಿಯೊಳಗಿದ್ದು, ಒಕ್ಕುಮಿಕ್ಕ ಶೇಷ ಪ್ರಸಾದವನ್ನು ಸ್ವೀಕರಿಸಿ, ತಮ್ಮ ನಿಜಸ್ವರೂಪವನ್ನು ಮರೆಸಿಕೊಂಡಿದ್ದ" ಮರುಳಶಂಕರ ದೇವರ ನಿಲವನ್ನು ಬಸವಣ್ಣನವರಿಗೆ ತಿಳಿಸುತ್ತಾನೆ. ಅಷ್ಟರಲ್ಲಿ ಪ್ರಸಾದ ಕುಂಡ ಬಿಟ್ಟು ಹೊರಬಂದ ಮರುಳಶಂಕರದೇವ ಪ್ರಭುದೇವರಿಗೆ ನಮಸ್ಕರಿಸಿ "ಬಸವರಾಜರ ದಯದಿಂದ ಪ್ರಭುದೇವರ ಮೂರ್ತಿಯಂ ಕಂಡು ಬದುಕಿದೆನು ನಿಮ್ಮ ಧರ್ಮ" ಎನ್ನುತ್ತಾನೆ.

ಪ್ರಭುದೇವರು ಮರುಳಶಂಕರ ದೇವರನ್ನು ಬಸವಣ್ಣನವರಿಗೆ ಪರಿಚಯಿಸಿ "ಅಂಗವಿಲ್ಲದ ಕುರುಹು, ಭವವಿಲ್ಲದ ಬಯಲು, ಬೆಳಗೆನರಿಯದ ಜ್ಯೋತಿಯ ಕಂಡೆಯಾ ಬಸವಣ್ಣ?" ಎಂದು ಹೇಳುತ್ತಾರೆ. ಆ ಮಾತುಗಳನ್ನು ಕೇಳಿದ ಮರುಳಶಂಕರದೇವ "ಪರುಷದ ದೆಸೆಯಿಂದ ಪಾಷಾಣದ ಕುಲ ಹರಿವಂತೆ ನೀ ಬಂದೆಯಲ್ಲಾ ಪ್ರಭುದೇವರ ಕರುಣೆಯಿಂದ ಬದುಕಿದೆ" ಎನ್ನುತ್ತಾನೆ.

ಮರುಳಶಂಕರದೇವನ ಮಹಿಮೆ ಬಸವಣ್ಣನವರ ಮನ ಮುಟ್ಟುತ್ತದೆ; ಹೃದಯ ತಟ್ಟುತ್ತದೆ "ಅಯ್ಯಾ, ನಿಮ್ಮ ಶರಣರು ಬಂದೆನ್ನ ಅಂಗಳದೊಳಗೆ ರಕ್ಷಿಸಿಹೆನೆಂದಿರಲು, ನಾನು ತೆರಹು ಮರಹಾಗಿರ್ದು ಕೆಟ್ಟೆನಯ್ಯಾ. ಅವರ ಇರವನರಿಯದೆ ಭವದೇಳಿಯಾದೆನಯ್ಯಾ" ಎಂದು



ಕೊರಗಿ ಮರುಗುತ್ತಾರೆ. ಮರುಳಶಂಕರ ದೇವರ ಕೃಪೆ ಎನಗಿನ್ನೆಂದಪ್ಪು ಹೇಳಾ" ಎಂದು ಬಸವಣ್ಣ ಪ್ರಭುದೇವರಲ್ಲಿ ಮೊರೆಯಿಡುತ್ತಾರೆ.

ಆಗ ಮರುಳಶಂಕರದೇವ "ನಿಮ್ಮ ಶರಣ ಬಸವಣ್ಣನ ನಿಲುವಿನ ಪರಿಯ ನೀವೆ ಬಲ್ಲಿರಲ್ಲದೆ ನಾನೆತ್ತ ಬಲ್ಲೆನಯ್ಯಾ, ನಿಮ್ಮ ಧರ್ಮ" ಎಂದು ಅತ್ಯಂತ ವಿನಮ್ರನಾಗಿ ಹೇಳುತ್ತಾನೆ. ಶರಣರ ನಿಲವು ನೋಡಿ, ಮರುಳಶಂಕರದೇವರ ಕೃಪೆಗಾಗಿ ಬೇಡು ಬಸವಣ್ಣನವರ ನಿಲುವನ್ನು 'ನಾನೆತ್ತ ಬಲ್ಲೆ' ಎನ್ನುವ ಸಜ್ಜನಿಕೆ ನೋಡಿ. ಅದೇ ಮೊದಲ ಬಾರಿಗೆ ಅವರಿಬ್ಬರ ಭೇಟಿ. ಆದರೂ ಪರಸ್ಪರರ ಬಗೆಗೆ ಅವರು ತೋರುವ ಗೌರವಾದರಗಳು ನಮ್ಮನ್ನು ಸೋಜಿಗಗೊಳಿಸುತ್ತವೆ.

ಮುಂದೆ, ಬಸವಣ್ಣನವರು ಚೆನ್ನಬಸವಣ್ಣನನ್ನು ಕುರಿತು "ನಿಜಪದದಲ್ಲಿ ತದ್ಗತರಾದ ಮರುಳಶಂಕರ ದೇವರ ನಿಲವ ನೋಡಾ" ಎಂದಾಗ, ಚೆನ್ನಬಸವಣ್ಣ "ಮರುಳಶಂಕರದೇವರ ಶ್ರೀಪಾದದ ಘನವನು ನಿಮ್ಮಿಂದ ಕಂಡು ಬದುಕಿದೆನು ಕಾಣಾ" ಎನ್ನುತ್ತಾನೆ. ಆಗ ಮರುಳಶಂಕರದೇವ "ಆಚಾರ ಸನ್ನಿಹಿತವಾದ ನಮ್ಮ ಚೆನ್ನಬಸವಣ್ಣನು ಸರ್ವಾಚಾರ ಸಂಪನ್ನನು" ಎಂದು ಹೇಳಿ ತನ್ನ ಗೌರವ ತೋರುತ್ತಾನೆ.

ಆಗ ಪ್ರಭುದೇವ "ಪರಮ ಪ್ರಸಾದಿ ಮರುಳ ಶಂಕರದೇವರ ನಿಲವ ಬಸವಣ್ಣನಿಂದ ಕಂಡೆ ನೋಡಾ" ಎಂದು ಸಿದ್ಧರಾಮನಿಗೆ ಹೇಳಿದರೆ, ಬಸವಣ್ಣ ಮರುಳಶಂಕರದೇವರ ನಿಲವ ಪ್ರಭುದೇವರು-ಸಿದ್ಧರಾಮಯ್ಯ ದೇವರಿಂದ ಕಂಡು ಬದುಕಿದೆನು" ಎನ್ನುತ್ತಾರೆ.

ಅದಕ್ಕೆ ಪ್ರತಿಕ್ರಿಯಿಸಿದ ಸಿದ್ಧರಾಮ "ಘನಪಥದಲ್ಲಿ ವೇದ್ಯವಾದ ಮರುಳಶಂಕರದೇವರ ನಿಲವ ಪ್ರಭು - ಬಸವಣ್ಣನಿಂದ ಕಂಡು ಬದುಕಿದೆನು ಕಾಣಾ ಕಪಿಲ ಸಿದ್ಧಮಲ್ಲಿಕಾರ್ಜುನಾ" ಎಂದು ಹೇಳಿದಾಗ, ಬಸವಣ್ಣನವರು ಮತ್ತೆ "ಕೂಡಲಸಂಗಮದೇವರಲ್ಲಿ ಬೆರೆಸಿ ಬೇರಿಲ್ಲದಿಪ್ಪ ಮರುಳಶಂಕರದೇವರ ನಿಲವ ಪ್ರಭುದೇವರು, ಸಿದ್ಧರಾಮಯ್ಯ ದೇವರು, ಹಡಪದಪ್ಪಣ್ಣಗಳಿಂದ ಕಂಡು ಎನ್ನ ಜನ್ಮ ಸಫಲವಾಯಿತ್ತೆಯ್ಯಾ" ಎನ್ನುತ್ತಾರೆ.

ಆಗ ಹಡಪದಪ್ಪಣ್ಣ "ಪರಮಪ್ರಸಾದಿ ಮರುಳಶಂಕರ ದೇವರ ನಿಲವ ಪ್ರಭು - ಬಸವಣ್ಣನಿಂದ ಕಂಡು ಬದುಕಿದೆನು" ಎಂದಾಗ, ಅಲ್ಲೇ ಇದ್ದ ಮಡಿವಾಳ ಮಾಚಿದೇವ "ಮರುಳಶಂಕರದೇವರ ನಿಲವ ಬಸವಣ್ಣನಿಂದ ಕಂಡು ಬದುಕಿದೆನು ಕಾಣಾ ಕಲಿದೇವರ ದೇವಾ" ಎನ್ನುತ್ತಾನೆ. ಈ ಮಾತಿನೊಂದಿಗೆ ಕಿನ್ನರಿ ಬ್ರಹ್ಮಯ್ಯನು ಬಸವಣ್ಣ-ಮಡಿವಾಳದೇವರ ಕರುಣದಿಂದ ಮರುಳಶಂಕರ ದೇವರ ನಿಲವುಕಂಡು ಬದುಕಿದೆನು" ಎಂದು ದನಿಗೂಡಿಸುತ್ತಾನೆ.

ಈ ಪರಸ್ಪರ ಋಣಸಲ್ಲಿಕೆ ಅಷ್ಟಕ್ಕೆ ಮುಗಿಯುವುದಿಲ್ಲ. 'ಮಡಿವಾಳಯ್ಯನ ಕರುಣದಿಂದ ಮರುಳಶಂಕರದೇವರ ನಿಲವಕಂಡು ಬದುಕಿದೆ ಕಾಣಾ, ಕಿನ್ನರ ಬ್ರಹ್ಮಯ್ಯ" ಎಂದು ಬಸವಣ್ಣನವರು ಹೇಳಿದರೆ, ಕಿನ್ನರಬ್ರಹ್ಮಯ್ಯ "ಮರುಳಶಂಕರದೇವರ ಮೂರ್ತಿಯ ನಿನ್ನಿಂದ ಕಂಡು ಬದುಕಿದೆನು ಕಾಣಾ ಸಂಗನಬಸವಣ್ಣ" ಎನ್ನುತ್ತಾನೆ. "ಕಿನ್ನರ ಬ್ರಹ್ಮಯ್ಯಗಳಿಂದ ಮರುಳಶಂಕರದೇವರ ನಿಲವ ಕಂಡು ಬದುಕಿದೆನು" ಎಂದು ಬಸವಣ್ಣನವರು ಮಾರ್ನುಡಿಯುತ್ತಾರೆ.

ಹೀಗೆ ಅಲ್ಲಿದ್ದ ಶರಣಗಣವೆಲ್ಲ ಮರುಳಶಂಕರ ದೇವರ ನಿಲವನ್ನು ಕಾಣಲು ಇಬ್ಬರಿಗೊಬ್ಬರು ಕಾರಣರಾಗುವ ಘನವನ್ನು ನೋಡಬೇಕು. ಒಬ್ಬೊಬ್ಬ ಶರಣನ ಮಾತಿನಿಂದಲೂ ಮರುಳಶಂಕರದೇವರ ಮನ-ಭಾವ-ಕರಣಂಗಳ ಮಾಗಿದ ನಿಲವು ಕಣ್ಣಿಗೆ ಕಟ್ಟಿದಂತೆ ನಮ್ಮ ಮುಂದೆ ನಿಲ್ಲುತ್ತದೆ. ಅಷ್ಟೇ ಅಲ್ಲ, ಅವರಲ್ಲಿ ಪರಸ್ಪರ ಇದ್ದ ಉನ್ನತ ಭಾವನೆಗಳ ಪರಿಚಯವಾಗುತ್ತದೆ. ಕಾರಣಿಕ ಪುರುಷರ ಈ ಸಮಾಗಮ - ಸಂವಾದಗಳು ಮಾನವ ಸಂಬಂಧದ ಒಂದು ನೀತಿ ಸಂಹಿತೆಯನ್ನು ನಮ್ಮ ಮುಂದಿಡುತ್ತವೆ.

ಶರಣ ಸಮೂಹದ ಒಕ್ಕೊರಲಿನ ಪ್ರಶಂಸೆಗೆ ಮರುಳಶಂಕರದೇವ ವಿನೀತನಾಗಿ ತನ್ನ ಕೃತಜ್ಞತೆಯನ್ನು ಹೀಗೆ ವ್ಯಕ್ತಪಡಿಸುತ್ತಾನೆ:

**ಎನ್ನ ಜ್ಞಾನಾತ್ಮದ ಚೇತನವಯ್ಯಾ ಪ್ರಭುದೇವರು**
**ಎನ್ನ ಪರಮಾತ್ಮದ ಚೇತನವಯ್ಯಾ ಸಿದ್ಧರಾಮಯ್ಯ ದೇವರು**
**ಎನ್ನ ಚಿನ್ಮಯಾತ್ಮದ ಚೇತನವಯ್ಯಾ ಸಂಗನ ಬಸವಣ್ಣನು**
**ಎನ್ನ ನಿರ್ಮಲಾತ್ಮದ ಚೇತನವಯ್ಯಾ ಷಟಸ್ಥಲಬ್ರಹ್ಮಿ ಚೆನ್ನಬಸವಣ್ಣನು**
**ಎನ್ನ ಮಹಾತ್ಮದ ಚೇತನವಯ್ಯಾ ನಿಜಸುಖಿ ಅಪ್ಪಣ್ಣನು**
**ಎನ್ನ ಜೀವಾತ್ಮದ ಚೇತನವಯ್ಯಾ ಮಡಿವಾಳ ಮಾಚಯ್ಯನು**
**ಎನ್ನ ಅರಿವಿನ ಚೇತನವಯ್ಯಾ ಕಿನ್ನರ ಬ್ರಹ್ಮಯ್ಯನು**
**ಇಂತಪ್ಪ ಪ್ರಮಥರ ಕರುಣದಿಂದ ಶುದ್ಧಸಿದ್ಧ**





ಪ್ರಸಿದ್ಧ ಪ್ರಸನ್ನ ಪ್ರಭುವೆ, ಶಾಂತ ಚೆನ್ನಮಲ್ಲಿಕಾರ್ಜುನ ದೇವಯ್ಯ ಬದುಕಿದೆನು ಕಾಣಾ, ನಿಮ್ಮ ಧರ್ಮ, ನಿಮ್ಮ ಧರ್ಮ !

ಎಂತಹ ಮನತುಂಬಿದ ಕೃತಜ್ಞತಾ ಭಾವ, ಮರುಳಶಂಕರದೇವ ಮತ್ತೆ ಸರ್ವರಿಗೂ 'ಶರಣು ಶರಣಾರ್ಥಿ' ಎಂದು ಹೇಳಿ, 'ಬಸವಣ್ಣನ ಮುಂದೆ ಬಯಲಾಗಿ ಹೋದೆನಯ್ಯಾ" ಎಂದು 'ನಿರವಯ' ನಾಗುತ್ತಾನೆ.

ಆಗ ಚೆನ್ನಬಸವಣ್ಣ "ಬಟ್ಟಬಯಲಾಗಿ ಹೋದ ಮರುಳಶಂಕರದೇವರ ಮಹಾತ್ಮಗೆ ನಮೋ ನಮೋ ಎಂದು ಬದುಕಿದೆನು" ಎಂದು ತನ್ನ ಪ್ರಣಾಮಗಳನ್ನು ಅರ್ಪಿಸುತ್ತಾನೆ. ಪ್ರಭುದೇವನು 'ಗುಹೇಶ್ವರನ ಶರಣರು ಎಂಥವರು ಎಂಬುದನ್ನು ಕಂಡೆಯಾ ಬಸವಣ್ಣ?' ಎಂದು ಕೇಳಿದಾಗ ಬಸವಣ್ಣನವರು, "ನಿಮ್ಮ ಶರಣರ ಘನವನೆನಗೆ ಹೇಳಲು ನಾನು ಕೇಳಲಮ್ಮದೆ, ನಮೋ ನಮೋ ಎನುತಿರ್ದೆನು ಕಾಣಾ ಪ್ರಭುವೆ" ಎನ್ನುತ್ತಾರೆ. "ನಿಮ್ಮ ಶರಣರ ನಿಲವನರಿವಡೆ ನಾನೇತರನವನಯ್ಯಾ" ಎಂದು ಹೇಳುವಷ್ಟು ವಿನಯದ ಸಾಕಾರಮೂರ್ತಿಯಾಗುತ್ತಾರೆ.

"ಕಾಯವಳಿದರೇನು, ಕಾಯ ಉಳಿದರೇನು? ಬಯಲಾದರೇನು? ಮನ ಮನ ಲಯವಾಗಿ, ಘನಕ್ಕೆ ಘನವಾದ ಶರಣರ ಕಂಡಡೆ ಕೂಡಲ ಚೆನ್ನಸಂಗಮನೆಂದು ಚೆನ್ನಸಂಗಮನೆಂದು, ಶಬುದ ಮುಗುದವಾಗಿರಬೇಕಲ್ಲದೆ ಚೋದ್ಯಕ್ಕೆ ಕಾರಣವೇನು ಹೇಳಾ, ಸಂಗನಬಸವಣ್ಣ" ಎಂದು ಚೆನ್ನಬಸವಣ್ಣನ ಅನುಭಾವದ ನುಡಿಯೊಂದಿಗೆ ಶೂನ್ಯ ಸಂಪಾದನೆಯ ಮರುಳಶಂಕರ ದೇವರ ಪ್ರಸಂಗ ಕೊನೆಗೊಳ್ಳುತ್ತದೆ.

ಪ್ರಭುದೇವ ಹೇಳಿರುವಂತೆ "ಭೃಂಗ ನುಂಗಿದ ರುಚಿಯ ನೊಂದು ಮಾಡಿ, ಗುಹೇಶ್ವರನೆಂಬ ಅಂಗದ ಹಂಗನಳಿದ ಶರಣರ ಮರುಳಶಂಕರದೇವ"ರ ಈ ಪ್ರಸಂಗ ನಿಜಕ್ಕೂ ಅವಿರಳವಾದುದು. ಶರಣ ಪರಂಪರೆಯ ಸಮುದಾಯ ಈ ಪ್ರಸಂಗದಿಂದ ಅರಿತುಕೊಳ್ಳಬೇಕಾದದ್ದು, ಆಚರಿಸಬೇಕಾಗಿದದ್ದು ಬಹಳವಿದೆ. ಈ ಹಿನ್ನೆಲೆಯಲ್ಲಿ ಹೇಳಬೇಕೆಂದರೆ 'ಬದುಕಿದೆನು ಕಾಣಾ' ಎನ್ನುವ ಸೂಳ್ನುಡಿ ಒಂದು ಅನುಭಾವ ಸಂಹಿತೆ, ಆಚಾರ ಸಂಹಿತೆ, ನಿಜವಾದ ಧರ್ಮಸಂಹಿತೆ, ವಿನಯಭಾವದ ವಿವೇಕ ಸಂಹಿತೆ !

ಈ ಸಂಹಿತೆಯ ಪಾಲನೆಯೇ ಬಸವ ಜಯಂತಿ ಆಚರಣೆಯ ಆಶಯವಾಗಬೇಕು.

## ಶ್ರೀ ಶ್ರೀ ಶಿವಕುಮಾರ ಶಿವಯೋಗಿ

ಸಿದ್ಧಗಂಗೆಯ ಮಠಾಧೀಶರು
ಸತತ ಪ್ರಯತ್ನವ ಮಾಡಿಹರು
ಸಾವಿರಾರು ಜನ ದೀನದಲಿತರಿಗೆ
ನಿತ್ಯದಾಸೋಹವ ನಡೆಸಿಹರು ॥ ೧ ॥

ಸಹಸ್ರ ಸಹಸ್ರ ಜನರು ದರುಶನಕಾಗಿ
ತವಕದಿಂದಲಿ ಕಾದಿಹರು,
ಇವರು ಬರುವಕಡೆ ನೆಟ್ಟುಗಣ್ಣಿನಲಿ
ಭಕ್ತಿಭಾವಗಳ ತೋರಿಹರು ॥ ೨ ॥

ಸಾವಿರಾರು ಜನ ಭಕ್ತಸಮೂಹಕೆ
ಮುಕ್ತಿಮಾರ್ಗವನು ತೋರಿಹರು,
ಕಾಯಕ ನಿಷ್ಠೆಯ ಕರ್ಮಫಲಗಳನು
ಅರುಹು ಕುರುಹಿನೊಳು ದರ್ಶಿಪರು ॥ ೩ ॥

ಧರ್ಮಸಾಧನೆಗೆ ನಿತ್ಯಸಂಜೆಯೊಳು
'ತತ್ತ್ವ' ಕಾಯಕವ ಮಾಡಿಹರು,
ಕತೆಯೊಳು ನುಡಿಯುತ ಮಡಿಯನು ಬೆಳಸುತ
ಬಸವ ಧರ್ಮ ಪ್ರಚಾರಕೆ ತೊಡಗಿಹರು ॥ ೪ ॥

'ಲೋಕ ನನ್ನ ಮನೆ ಕುಲವು ಮಾನವ'
ರೆಂಬ ನಿಲುವಿನೊಳು ನಡೆದಿಹರು,
ಶ್ರೀ ಗುರು ಸಿದ್ಧರ ಜೀವನ ಜ್ಯೋತಿಯ
ಸಕಲ ಹೃದಯದೊಳು ಬೆಳಗಿಹರು ॥ ೫ ॥

ಭಕ್ತಿಯ ರಸದೊಳು ಮುಕ್ತಿಯನರಸುತ
ಮುಗ್ಧರ ತನುಮನ ಸೆಳೆದಿಹರು,
ಎಲ್ಲ ವರ್ಗದ ಹೃದಯ ಕಮಲಗಳ
ಜ್ಞಾನಧಾರೆಯೊಳು ಬೆಳಸಿಹರು ॥ ೬ ॥

ಶರಣ ಸಂತರ ಮುತ್ತಿನಂತ ನುಡಿ
ಉದ್ಧಾನ ಶಿಷ್ಯರೊಳು ಮೂಡಿಹವು,
ಧರ್ಮ ದರ್ಪಣದಿ ಶ್ರೀಗುರು ವಚನವು
ಥಳಥಳಿಸುತ ಮನದಲಿ ನೆಲಸಿಹವು ॥ ೭ ॥

ಶರಣು ಶರಣು ಗುರು 'ಅರಿವೆ ಗುರುವು ನೀ'
ಪರಮಪೂಜ್ಯ ಶ್ರೀ ಶಿವಕುಮಾರ,
ತವಚರಣಗಳಿಗೆ ಶರಣಾರ್ಥಿ ಶ್ರೀಗುರು
ನಮೋ ನಮೋ ಶ್ರೀ ಶಿವಕುಮಾರ ॥ ೮ ॥

– ವಿದ್ವಾನ್ ಎಸ್. ಷಡಕ್ಷರಯ್ಯ
ಶ್ರೀ ಸಿದ್ಧಗಂಗಾ ಮಠ





ಲೇಖನ

# ಡಾ. ಶ್ರೀ ಜಚನಿಯವರ 'ಮಾದೇವಿ' ಕೃತಿಯಲ್ಲಿ ಅಕ್ಕನ ಚಿತ್ರಣ

*(ಕಳೆದ ಸಂಚಿಕೆಯಿಂದ)*

– ಡಾ. ಉಷಾಕಿರಣ್ *

ಹಸಿವಾದಡೆ ಊರೊಳಗೆ ಭಿಕ್ಷಾನ್ನಗಳುಂಟು
ತೃಷೆಯಾದಡೆ ಕೆರೆ ಹಳ್ಳ ಬಾವಿಗಳುಂಟು
ಅಂಗಾತೀತಕ್ಕೆ ಬೀಸಾಟ ಅರಿವೆಗಳುಂಟು
ಶಯನಕ್ಕೆ ಹಾಳು ದೇಗುಲಗಳುಂಟು
ಚನ್ನಮಲ್ಲಿಕಾರ್ಜುನಯ್ಯಾ
ಆತ್ಮಸಂಗಾತಕ್ಕೆ ನೀನೆನಗುಂಟು.

ಆತ್ಮಸಂಗಾತಕ್ಕೆ ತನ್ನ ದೈವ ತನ್ನೊಂದಿಗೆ ಇದೆ ಎಂಬ ನಂಬಿಕೆಯೇ ಅಕ್ಕನಿಗೆ ಧೈರ್ಯ ನೀಡಿದೆ. ಮಲತ್ರಯಗಳನ್ನು ಕಳೆದು ತ್ರಿಕರಣ ಶುದ್ಧತೆಯನ್ನು ಸಾಧಿಸಿದ ಅಕ್ಕನಿಗೆ ಆತ್ಮಸಾಂಗತ್ಯದ ಶಕ್ತಿ ಸಿದ್ಧಿಸಿದೆ. ಆತ್ಮವಿಶ್ವಾಸವನ್ನು ಸಾಧಿಸಿದ ಅಕ್ಕನಿಗೆ ಹಸಿವು, ನೀರಡಿಕೆ, ಚಳಿ, ನಿದ್ದೆಗಳ ಚಿಂತೆ ಬಾಧಿಸುವುದಿಲ್ಲ. 'ಅಂಗಶೀತಕ್ಕೆ ಬೀಸಾಟ ಅರಿವೆಗಳುಂಟು' ಎನ್ನುವ ಅಕ್ಕನಿಗೆ ಅರಿವೆ ಮುಖ್ಯವಾದದ್ದಲ್ಲವಾದರೂ ಅಂಗಶೀತ ಅಥವಾ ಚಳಿಗೆ ಬಿಸಾಡಿರುವ ಅರಿವೆ ಇದ್ದರೆ ಸಾಕು ಎನ್ನುವ ವಿರಕ್ತಿ ಇದೆ. ಅರಿವೆಯನ್ನೇ ಮುಖ್ಯವಾಗಿಸಿಕೊಂಡು ಆಕೆ ಬದುಕಲಿಲ್ಲ ನಿಜ. ಆದರೆ ಅರಿವೆಯಿಲ್ಲದೆಯೇ ಇರಬೇಕೆಂಬ ನಿಯಮವೇನೂ ಇರಲಿಲ್ಲ. ಈ ತಿಳಿವಳಿಕೆ ಇಂದಿನ ಸಂದರ್ಭದಲ್ಲಿ ಬದಲಾವಣೆಯಾಗಿ ಆಕೆಯ ಮೂರ್ತಿ ಪ್ರತಿಷ್ಠಾಪನೆಯಲ್ಲಿ ಮಾರ್ಪಾಡು ಮಾಡಬಹುದೆನಿಸುತ್ತದೆ. ಶ್ರೀ ಜಚನಿಯವರು ಅಕ್ಕನಲ್ಲಿ ನಿರ್ವಾಣ-ನಿರ್ಯಾಣ ಎರಡೂ ಪದಗಳು ಬಳಕೆಯಾಗಿರುವುದನ್ನು ವಿಶ್ಲೇಷಿಸಿದ್ದಾರೆ. 'ಉಟ್ಟಂತಹ ಉಡಿಗೆ ತೊಡಿಗೆಯನೆಲ್ಲ ಸೆಳೆದುಕೊಳ್ಳಬಹುದಲ್ಲದೆ ಮುಚ್ಚಿರ್ದ ಮುಸುಕಿರ್ದ ನಿರ್ವಾಣವ ಸೆಳೆದುಕೊಳ್ಳಬಹುದೆ?', 'ಚನ್ನಮಲ್ಲಿಕಾರ್ಜುನ ದೇವರ ಬೆಳಗನುಟ್ಟು ಲಜ್ಜೆಗೆಟ್ಟವಳಿಗೆ ಉಡುಗೆ ತೊಡುಗೆಯ ಹಂಗೇಕೋ ಮರುಳೆ?' ಎಂದು ಅರಿವೆಯ ಹಂಗನ್ನು ಕೂಡ ಕಳೆಯುವ ಮೂಲಕ ಕಾಲಕರ್ಮ ಮಾಯೆಗಳನ್ನು ಗೆದ್ದಿದ್ದಾಳೆ. ಹಾಗೆಯೇ, 'ತನು ಬತ್ತಲಾದಡೇನೋ, ಮನ ಬತ್ತಲಾಗದನ್ನಕ್ಕ' ಎಂದು ನಿಜಜ್ಞಾನದ ಸಾಧನೆಯ ಬಗ್ಗೆ ಹೇಳಿರುವುದನ್ನು ಗಮನಿಸಬೇಕು. ಮಾಯೆಯ ಗೆದ್ದ ಅಕ್ಕನ ದಿಟ್ಟತನಕ್ಕೆ ಇಡೀ ಲೋಕ ಬೆರಗಾಗುತ್ತದೆ. ಮನಬತ್ತಲೆಯಾಗದೆ ಕೇವಲ ತನು ಬತ್ತಲೆಯನ್ನು ಆಚರಿಸುವವರಿಗೆ ಇದು ಒಂದು ಸವಾಲಾಗಿದೆ.

ಅಂಗದ ಭಂಗವ ಲಿಂಗಮುಖದಿಂದ ಗೆಲಿದೆ ಎನ್ನುವ ಅಕ್ಕ 'ಮನಸಿಜನ ತಲೆಯ ಬರಹವ ತೊಡೆದೆನು' ಎಂದು ಹೇಳಿ ದಿಟ್ಟತೆಯಲ್ಲಿ ಎಲ್ಲರಿಗೂ ಮಾದರಿಯಾಗಿದ್ದಾಳೆ. ಪರಿಪಕ್ವವಾದ ಪರಮಾನುಭೂತಿಯಲ್ಲಿ 'ಅಘಟಿತ ಘಟಿತನ ಒಲವಿನ ಶಿಶು'ವಾಗುತ್ತಾಳೆ. ಗುರು ಕೃಪೆಯಿಂದ ಕರ್ಮವನ್ನು ಗೆಲ್ಲುತ್ತಾಳೆ, ತಾಣೇ ಸ್ವತಃ ಗುರುಶಕ್ತಿಯಾಗುತ್ತಾಳೆ. 'ಶ್ರೀಗುರು ಲಿಂಗದೇವರು ತಮ್ಮ ಕರಸ್ಥಲವ ತಂದು ಎನ್ನ ಶಿರಸ್ಥಲದ ಮೇಲೆ ಇರಿಸಿದಾಗಳೆ ಎನ್ನ ಭವಂ ನಾಸ್ತಿಯಾಯಿತ್ತು' ಎಂದು ಗುರುಕರುಣೆಯನ್ನು ನೆನೆದು ಕೃತಾರ್ಥಳಾಗಿದ್ದಾಳೆ. ಅನುಭಾವದ ಅನುಭೂತಿಯನ್ನು ಪಡೆದಿದ್ದಾಳೆ. 'ನರಜನ್ಮವ ತೊಡೆದು ಹರಜನ್ಮವ ಮಾಡಿದ ಗುರುವೇ ನಮೋ' ಎಂದು ಗುರುಶಕ್ತಿಗೆ ವಂದಿಸಿದ್ದಾಳೆ. ಗುರು-ಲಿಂಗ-ಮಂತ್ರಗಳ ಪ್ರಭಾವದಿಂದ ನಿಜದ ನಿಲವನ್ನು ಅರಿತಿದ್ದಾಳೆ. ಆಕೆಯ ವಚನಗಳ ಪ್ರಕಾರ 'ಶ್ರೀಗುರುಲಿಂಗದೇವರು' ಆಕೆಯ ಗುರುಗಳೆಂದು ಲೇಖಕರು ಉಲ್ಲೇಖಿಸಿದ್ದಾರೆ. ಗುರುವಿನ ಅನುಗ್ರಹದಿಂದ ಮಾದೇವಿ ಸುಚಿತ್ತದ ಪುತ್ಥಳಿಯಾದಳು, ಚಿತ್ತದ ಮಲವಳಿದ ಶುದ್ಧ ಚಿನ್ನದ ಬೊಂಬೆಯಾದಳು. ಸುಚಿತ್ತವು ಅನುಭಾವದ ಸಿದ್ಧಿಯ ಪ್ರತೀಕವಾಗಿದೆ; ಮಾನಸಿಕ ಶುದ್ಧತೆಯ ಸಂಕೇತವೂ ಆಗಿದೆ.

* ೨೦೩, ಸೌಂದರ್ಯ ಲಿಂಕ್ಸ್ ಗೃಹಸ್ತೋಮ, ಲಿಂಕ್ ರಸ್ತೆ, ಶೇಷಾದ್ರಿಪುರಂ, ಬೆಂಗಳೂರು-೫೬೦ ೦೨೦

**ನಡೆಶುಚಿ, ನುಡಿಶುಚಿ, ತನುಶುಚಿ,**
**ಮನಶುಚಿ, ಭಾವಶುಚಿ,**
**ಇಂತೀ ಪಂಚ ತೀರ್ಥಂಗಳನೊಳಗೊಂಡು**
**ಮರ್ತ್ಯದಲ್ಲಿ ನಿಂದ**
**ನಿಮ್ಮ ಶರಣರ ತೋರಿ ಎನ್ನನುಳುಹಿಕೊಳ್ಳಾ**
**ಚನ್ನಮಲ್ಲಿಕಾರ್ಜುನಾ.**

ಇಲ್ಲಿ ತನು ಮನಗಳ ಶುದ್ಧಿಗಾಗಿ ಅಕ್ಕ ಅನುಸರಿಸುವ ಪಂಚಶೀಲಗಳು – ಸದಾಚಾರ, ಸದ್ವಿಚಾರ, ಸತ್‌ಕಾರ್ಯ-ಸತ್‌ಪೂಜೆ, ಸಚ್ಚಿಂತನ, ಶಿವಾನುಭವ. ಇವುಗಳಿಂದ ಶುಚಿಗೊಂಡ ತನುಮನಗಳು, ನಡೆನುಡಿಗಳು ಅರಿವಿನ ಸಾಧನೆಗೆ ಅರ್ಹವಾಗುತ್ತವೆ. ಈ ನುಡಿಗಳಲ್ಲಿ ಲೇಖಕರು ಅಕ್ಕನ ಬದುಕಿನ ಸತ್ಯದರ್ಶನವನ್ನು ಕಾಣುತ್ತಾರೆ. ಸುಚಿತ್ತ, ಶುಚಿತ್ವಗಳಿಂದಾಗಿ ಆಕೆ ಸತ್‌ಶಕ್ತಿಯನ್ನು ಸಾಧಿಸಿದ್ದಳು. ತನು ಶುಚಿಯಾಗಿ ಮನಭಾವಗಳು ಶುಚಿಯಾಗದಿದ್ದರೆ ಪ್ರಯೋಜನ ವಿಲ್ಲವೆಂದು ಹೇಳಿದ ಅಕ್ಕ ಚನ್ನ ಮಲ್ಲಿಕಾರ್ಜುನನನ್ನು ಆಗಲದೆ ಇರುವ ಭಕ್ತಿ ವಿಧಾನ ಹೀಗಿದೆ,

**ಸಜ್ಜನಳಾಗಿ ಮಜ್ಜನಕ್ಕೆರೆವೆ**
**ಶಾಂತಳಾಗಿ ಪೂಜೆಯ ಮಾಡುವೆ**
**ಸಮರತಿಯಿಂದ ನಿಮ್ಮ ಹಾಡುವೆ**
**ಚನ್ನಮಲ್ಲಿಕಾರ್ಜುನಯ್ಯಾ**
**ನಿಮ್ಮನಗಲದ ಪೂಜೆ ಅನುವಾಯಿತ್ತೆನಗೆ**

ಇಂತಹ ಭಕ್ತಿ ತ್ರಿಕರಣ ಶುದ್ಧಿಯಿಲ್ಲದೆ ಸಿದ್ಧಿಸುವುದಿಲ್ಲವೆಂಬುದನ್ನು ಈ ವಚನದಲ್ಲಿ ಕಾಣುತ್ತೇವೆ. ಆತ್ಮಶಕ್ತಿಯನ್ನು ಸಿದ್ಧಿಸಿಕೊಂಡು ಶಕ್ತಿಸ್ವರೂಪಿಣಿಯಾದ ಅಕ್ಕನಿಗೆ ಅಲ್ಲಮನು ಕೂಡ ಮಣಿದು 'ಮಹದೇವಿಯಕ್ಕನ ಪಾದಕ್ಕೆ ನಮೋ ನಮೋ ಎಂಬೆನು', ಎಂದು ಹೇಳಿರುವುದನ್ನು ನೋಡಿದಾಗ 'ಕೈಲಾಸದಲ್ಲಿ ಗಿರಿಜೆಗೆ ಕೈ ಮುಗಿಯದ ನಿರ್ಮಾಯ ಗಣೇಶ್ವರ, ಬನವಾಸಿಯಲ್ಲಿ ಮಾಯಾದೇವಿಗೆ ಮೈಯಿಕ್ಕದ ಅಲ್ಲಯ್ಯ, ಕಲ್ಯಾಣದಲ್ಲಿ ಮಾದೇವಿಯಕ್ಕನ ಪಾದಕ್ಕೆ ನಮೋ ಎಂದನು' ಎಂದು ಹೇಳುವ ಶ್ರೀ ಜ.ಚ.ನಿ.ಯವರ ಮಾತುಗಳಲ್ಲಿ ಅಕ್ಕನ ಬಗ್ಗೆ ಇರುವ ಪೂಜ್ಯಭಾವನೆ ಎದ್ದುಕಾಣುತ್ತದೆ. ಅವರು ಮುಂದುವರಿದು 'ದೇವತೆಯನ್ನು, ಮಾಯೆಯನ್ನು ಮೀರಿದಾತ ಅಲ್ಲಮ ಇಳೆಯ ಹೆಣ್ಣಿನ ಸಚ್ಛಕ್ತಿಗೆ ಬಾಗುತ್ತಾನೆ. ಅಂಥ ಅಲ್ಲಮ ಅಕ್ಕನ ಸಚ್ಚಿತ್ ಸ್ವರೂಪನಾದ ಚನ್ನಮಲ್ಲಿಕಾರ್ಜುನನ್ನು ಆಕೆ ಪಡೆಯಲು ನೆರವಾದ ಮಾಧ್ಯಮಿಕ ಮಹಾಚೇತನ' ಎಂದಿದ್ದಾರೆ. ಕಾಯದ ಇಚ್ಛೆ, ಮನದ ಇಚ್ಛೆ, ಮಾಯೆಯ ಇಚ್ಛೆಗೆ ಮಣಿಯುವವಳಲ್ಲ ಅಕ್ಕ, ಸಚ್ಚಿದ್ರೂಪನಾದ ಚನ್ನನನ್ನು ಒಲಿಸಲು ಸತ್ಕಳೆಯಾಗಿ ರೂಪುಗೊಂಡವಳು. ಚನ್ನನೊಂದಿಗೆ ತನ್ನ ವಿವಾಹವಾಗಿದೆ ಎಂಬ ಭಾವನೆಯಲ್ಲಿ ಆಕೆಯ ನುಡಿಗಳು ಹೀಗಿವೆ :

**ಗುರುವೆ ತೆತ್ತಿಗನಾದ, ಲಿಂಗವೆ ಮದುವಣಿಗನಾದ;**
**ಆನು ಮದುವಳಿಗೆಯಾದೆನು,**
**ವಸುಧೆಯ ಭಕ್ತರೆಲ್ಲರು ನಿಬ್ಬಣಿಗರಾದರು**
**ಕೊಟ್ಟರು ಸಾದೃಶ್ಯವಪ್ಪ ವರನ ನೋಡಿ !**
**ಇದು ಕಾರಣ ಚನ್ನಮಲ್ಲಿಕಾರ್ಜುನನೆ ಗಂಡನೆನಗೆ !**

ಅಕ್ಕನ ಅಲೌಕಿಕ ವಿವಾಹದ ಚಿತ್ರಣವಿದು. ಈ ಸಾಂಕೇತಿಕ ವಿವಾಹದಲ್ಲಿ ಗುರು ಲಿಂಗ ಜಂಗಮರೆಲ್ಲರ ಪಾತ್ರವಿದೆ. ಅಪ್ರತಿಮ ಅಲೌಕಿಕ ದೃಷ್ಟಿ ಅಕ್ಕನದು. ಲಿಂಗದೊಂದಿಗೆ ಮದುವಣಗಿತ್ತಿಯಾಗುವ ಸಾಹಸ, ವೀರಭಾವ, ಅಲೌಕಿಕ ಶೃಂಗಾರ ಭಾವಗಳು ಈ ವಚನದಲ್ಲಿ ಸಮ್ಮೇಳನಗೊಂಡು ಇದೊಂದು ಮಹಾಕಾವ್ಯದ ಅನುಭವ ನೀಡುತ್ತದೆಯೆಂದು ಲೇಖಕರು ಈ ಕಾವ್ಯಸಂದರ್ಭವನ್ನು ವರ್ಣಿಸಿದ್ದಾರೆ. ಇಲ್ಲಿನ ಅಕ್ಕನ ಅಲೌಕಿಕ ರೂಪಕ್ಕೆ ಬೆರಗಾಗಿದ್ದಾರೆ. ಅಕ್ಕನ ವಚನದ ಸರಳ ಗಂಭೀರ, ಔಚಿತ್ಯಪೂರ್ಣ ನುಡಿಗಳು ಅಲೌಕಿಕವಾದ ಭಾವಪ್ರತಿಮೆಯಾಗಿ ರೂಪುಗೊಳ್ಳುವುದನ್ನು ನೋಡಿ ಚಕಿತಗೊಳ್ಳುವ ರೀತಿಯಲ್ಲಿ ವರ್ಣಿಸಿದ್ದಾರೆ. ಭಾವಕ್ಕೆ ತಕ್ಕ ಪದವಿನ್ಯಾಸ, ಅನುಭಾವಕ್ಕೆ ತಕ್ಕ ರಸಪ್ರವಾಹ ಎರಡನ್ನು ಈ ವಚನದಲ್ಲಿ ಕೂಡಿಬಂದಿವೆಯೆಂದು ಹೇಳಿದ್ದಾರೆ. 'ಈ ವಚನ ಕೇವಲ ಅವಳ ಭಾವ ಪ್ರತೀಕವಲ್ಲ; ಭಾವಾನುಭಾವಗಳ ಪ್ರತಿಮೆ' ಎಂದಿದ್ದಾರೆ.

ತನ್ನ ಇಷ್ಟದೈವದೊಡನೆ ಅನನ್ಯತೆಯನ್ನು ಸಿದ್ಧಿಸಿಕೊಂಡ ಮೇಲೆ ಅಕ್ಕನಿಗೆ ಏಕಾಂತವಿದ್ದರೇನು, ಲೋಕಾಂತವಿದ್ದರೇನು, ಎರಡೂ ಸ್ಥಿತಿಯಲ್ಲಿ ಸಮನಾಗಿ ಇರಬಲ್ಲಳು ಎಂಬುದಕ್ಕೆ ಆಕೆಯದೇ ವಚನ ಪ್ರಮಾಣವಾಗಿದೆ.

**ಉಸಿರಿನ ಪರಿಮಳವಿರಲು ಕುಸುಮದ ಹಂಗೇಕಯ್ಯಾ ?**
**ಕ್ಷಮೆ, ದಮೆ, ಶಾಂತಿ, ಸೈರಣೆಗಳಿರಲು ಸಮಾಧಿಯ ಹಂಗೇಕಯ್ಯಾ?**
**ಲೋಕವೆ ತಾನಾದ ಬಳಿಕ ಏಕಾಂತದ ಹಂಗೇಕಯ್ಯ**
**ಚನ್ನಮಲ್ಲಿಕಾರ್ಜುನಾ?**



ಕ್ಷಮೆ, ದಮೆ ಮುಂತಾದ ಎಲ್ಲ ಸದ್ಗುಣಗಳನ್ನು ಅಳವಡಿಸಿಕೊಂಡವಳು ಅಕ್ಕ. ಚನ್ನಮಲ್ಲಿಕಾರ್ಜುನ ನೊಳಗಾಗಿ 'ಹತ್ತರೊಡನೆ ಹನ್ನೊಂದಾಗಿಪ್ಪುದನೇನ ಹೇಳುವೆ' ಎನ್ನುವ ಭಾವಾತೀತ ಸ್ಥಿತಿಯನ್ನು ಸಾಧಿಸಿರುವುದು ಆಕೆಯ ವಚನಗಳಲ್ಲಿ ಕಾಣುತ್ತದೆ. 'ಹತ್ತರೊಳಗೆ ಹನ್ನೊಂದಾಗಿ ನೀರತಾವರೆಯಂತಿಪ್ಪೆ' ಎನ್ನುವ ಅಕ್ಕ ಲೋಕದಲ್ಲಿದ್ದು ಇಲ್ಲದಂತೆ ಅನುಭಾವಿಯಾಗಿದ್ದಳು. ಇಲ್ಲಿ ಶ್ರೀ ಜಚನಿಯವರು ಅಕ್ಕನ ಎರಡು ಬಗೆಯ ಪದಪ್ರಯೋಗವನ್ನು ಗುರುತಿಸಿದ್ದಾರೆ. ಒಂದೇ ರೀತಿಯೇನೋ ಎಂದು ಕಾಣುವ ಎರಡು ಬಗೆಯ ಅರ್ಥ ಹೊರಡಿಸುವ ಪದಗಳು ವಿಶೇಷವಾಗಿ ಬಳಕೆಯಾಗಿವೆ – 'ಹತ್ತರೊಳಗೆ ಹನ್ನೊಂದಾಗಿರುವುದು', ಹತ್ತರೊಡನೆ ಹನ್ನೊಂದಾಗಿ ರುವುದು' ಒಂದು ಅಂತರಂಗದ ಭಾವನೆ, ಮತ್ತೊಂದು ಬಹಿರಂಗದ ಆಚಾರ. ಎರಡರಲ್ಲೂ ಒಳಗಾಗಿ ಮಾಡಿಯೂ ಮಾಡದಂತಿರುವ ಕ್ರಿಯಾಕುಶಲತೆ ಅಕ್ಕನದು. ಹತ್ತರೊಡನೆ ಹನ್ನೊಂದಾಗಿರುವ ಪರಿ ಹೇಳಲು ಬಾರದ ಅನುಭಾವದ ಸ್ಥಿತಿ, ಆಂತರಿಕವಾದದ್ದು. ಹತ್ತರೊಳಗೆ ಹನ್ನೊಂದಾಗಿ ರುವುದು ನೀರಿನೊಳಗೆ ತಾವರೆಯ ಹಾಗೆ ಅಂಟಿಯೂ ಅಂಟದಂತಹ ಸ್ಥಿತಿ. ಹೊರಸಂಬಂಧಗಳಲ್ಲಿ ದೈವವನ್ನು ಕಾಣುವಂತೆ 'ವನವೆಲ್ಲ ನೀನೆ, ವನದೊಳಗಣ ದೇವತರುವೆಲ್ಲ ನೀನೆ' ಎಂಬ ವಿಶ್ವಾತ್ಮಭಾವನೆ. ಪರಮಾತ್ಮನು ವೈಯಕ್ತಿಕವಾಗಿ ಯಾವುದೋ ರೂಪಧರಿಸಿ ಬಂದರೆ ಆಕೆಗೆ ಒಪ್ಪಿಗೆ ಇಲ್ಲ. ವಿಶ್ವಾತ್ಮನಾಗಿ ಸರ್ವಭರಿತನಾಗಿ ತೋರುವ ಅನುಭವ ದಕ್ಕಬೇಕು ಎಂದು ಹಂಬಲಿಸುವ ಅಕ್ಕ ವಿಶ್ವಶಕ್ತಿಯನ್ನು ಕುರಿತು ಚಿಂತಿಸುತ್ತಾಳೆ.

ಯೋಗ ಸಾಧನೆಯಲ್ಲಿ ಉನ್ನತ ಅನುಭವ ಪಡೆದ ಅಕ್ಕ ತನ್ನ ಅನುಭವವನ್ನು ಬೆಡಗಿನ ಮೂಲಕ ಹೇಳುವ ವಿಧಾನ ಸುಂದರವಾಗಿದೆ: "ರವಿಯ ಕಾಳಗವ ಗೆಲಿದು, ಒಂಬತ್ತು ಬಾಗಿಲವ ಮುರಿದು, ಅಷ್ಟದಳಾರಮಂ ಸುಟ್ಟು, ಮೇಲುಪ್ಪರಿಗೆಯ ಮೆಟ್ಟಿ, ಅಲ್ಲ-ಅಹುದು, ಉಂಟು-ಇಲ್ಲ, ಬೇಕು-ಬೇಡೆಂಬ ಆರರಿತಾತನೆ ಗುರು ತಾನೆ ಬೇರಲ್ಲ', 'ಊರ್ಧ್ವ ಕಮಲದೊಳು ಉದಯವಾದ ಚನ್ನಮಲ್ಲಿಕಾರ್ಜುನಯ್ಯ' ಎಂದು ಊರ್ಧ್ವಕಮಲ ಎಂದರ ಆಜ್ಞಾಚಕ್ರದಲ್ಲಿ ಬೆಳಕು ಉದಯ ವಾಗಿರುವುದನ್ನು, ಚನ್ನಮಲ್ಲಿಕಾರ್ಜುನನೇ ಉದಯ ವಾದಂತೆ ಎನ್ನುವ ಅಕ್ಕನ ಪರಿಭಾವನೆ, ಪ್ರತೀಮಾತ್ಮಕ ಪರಿಕಲ್ಪನೆಯಾಗಿದ್ದು ಕಾವ್ಯ ಸೌಂದರ್ಯ, ಭಾವ ಸೌಂದರ್ಯಗಳು ಒಡಗೂಡಿದ ಅನುಭಾವದ ರಸಾಮೃತವಾಗಿದೆ. ಆಜ್ಞಾಚಕ್ರವನ್ನು ಊರ್ಧ್ವಕಮಲ ವೆಂದು ಹೆಸರಿಸಿ ಅದು ಅರಳಿದಾಗ ಅದರಿಂದ ಸೂಸುವ ಬೆಳಕೇ ಪರಮಾನಂದ ರೂಪವೆಂಬುದನ್ನು ಸುಂದರ ಶೈಲಿಯಲ್ಲಿ ಅಭಿವ್ಯಕ್ತಗೊಳಿಸಿದ್ದಾಳೆ, ಆಜ್ಞಾಚಕ್ರದ ಬಿಂದುವಿನಲ್ಲಿ ಬೆಳಕು ಕಾಣುವ ಮಾರ್ಗವನ್ನು ನಿರೂಪಿಸಿದ್ದಾಳೆ. ರವಿಯ ಕಾಳಗವೆಂದರೆ ಬಾಹ್ಯಲೋಕದ ವ್ಯವಹಾರ. ಇದನ್ನು ನಿಲ್ಲಿಸಿ ಅಂದರೆ ಕರ್ಮವನ್ನು ಗೆದ್ದು, ಹಂತ ಹಂತವಾಗಿ ಉಸಿರನ್ನು ಇಡಾಪಿಂಗಳ ನಾಡಿಗಳಿಂದ ಸುಷುಮ್ನ ನಾಡಿಯಲ್ಲಿ ಹರಿಸಿದಾಗ, ಆಜ್ಞಾಚಕ್ರದಲ್ಲಿ ಅದು ನೆಲೆಗೊಂಡು ನಿಂತಾಗ ಕೋಟಿ ಕೋಟಿ ಮಿಂಚುಗಳ ಮಹಾಬೆಳಗು ಮೂಡಿ ಮಹಾನ್ ಚೈತನ್ಯದ, ಮಹಾನಂದದ ಅನುಭವವಾಗಿ ಹೃದಯದಲ್ಲಿ ದೈವತ್ವದ ಉದಯ ವಾಗುತ್ತದೆಂದು ಅಕ್ಕ ಇಲ್ಲಿ ಪ್ರತಿಮಾಭಾವದಲ್ಲಿ ಹೇಳಿದ್ದಾಳೆ.

ಆತ್ಮದರ್ಶನಕ್ಕೆ ಲೋಕದರ್ಶನ ಸಹಕಾರಿ ಎಂದಿದ್ದಾರೆ ಶ್ರೀ ಜಚನಿಯವರು. ಲೋಕಪ್ರಜ್ಞೆಯಿಲ್ಲದ ಆತ್ಮಪ್ರಜ್ಞೆ ಅಳವಡದು, ಅಳವಟ್ಟರೂ ಅಪ್ರತ್ಯಕ್ಷ; ಅನನುಭೂತ. ಲೋಕದ ಜಂಜಡ ಎಂಥವರಿಗೂ ಇರುವುದೆ. ಇವುಗಳಿಗೆ ಸೋಲದೆ ಶಾಂತಿ ಸಮಾಧಾನಗಳಿಂದ ಇರುವುದನ್ನು ಕಲಿಯಬೇಕು ಎನ್ನುವ ಅಕ್ಕ, 'ಬೆಟ್ಟದ ಮೇಲೊಂದು ಮನೆಯಮಾಡಿ ಮೃಗಗಳಿಗಂಜಿದಡೆಂತಯ್ಯಾ?'... ಎಂದು ಹೇಳುತ್ತಾ 'ಲೋಕದೊಳಗೆ ಹುಟ್ಟಿರ್ದ ಬಳಿಕ ಸ್ತುತಿನಿಂದೆಗಳು ಬಂದಡೆ ಮನದಲ್ಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕು', ಎನ್ನುತ್ತಾಳೆ. ಅಕ್ಕನಲ್ಲಿ 'ಕ್ರಿಯೆ, ಜ್ಞಾನ, ಅನುಭವಗಳು ಸಂಗಮಿಸಿ ಆಕೆ ಹಿರಿದು ಕಿರಿದೆಂಬ ಭೇದವಿಲ್ಲದಂತಿದ್ದಳು. ಅರಿತು ಆಚಾರ ಬಿಡಲಿಲ್ಲ, ಆಚರಿಸಿ ಅರಿವನ್ನು ಬಿಡಲಿಲ್ಲ. ಲೋಕದೊಡನಿದ್ದು ಲೋಕೋತ್ತರ ಬಾಳು ಬಾಳಿದಳು. ಸ್ತುತಿ ನಿಂದೆಗಳಿಗೆ ಹಿಗ್ಗುವುದು-ತಗ್ಗುವುದು ತಕ್ಕುದಲ್ಲ... ಸತ್ಯದೃಷ್ಟಿ ಸತ್ಯಾನುಭೂತಿ ಇರಬೇಕು. ಶಾಂತಿ ಸಮಾಧಾನಗಳು ಬದುಕಿನ ಮೂಲದ್ರವ್ಯ... ಯಾವ ಕಾರಣದಿಂದಲೂ ಅದನ್ನು ಕಳೆದುಕೊಳ್ಳಬಾರದು... ಸಮತ್ವ ಜೀವನಕ್ಕಿಂತ ಬೇರೆ ಯೋಗವಿಲ್ಲ' ಎನ್ನುವ ಶ್ರೀ ಜಚನಿಯವರ ಮಾತುಗಳು ಮನನ ಮಾಡುವಂತದ್ದು.

"ದಯವಿಲ್ಲದ ಧರ್ಮ, ಭಯವಿಲ್ಲದ ಭಕ್ತಿ, ನಯವಿಲ್ಲದ ಶಬ್ದವದೇತಕ್ಕೆ ಪ್ರಯೋಜನ" ಎನ್ನುವ ಅಕ್ಕನಿಗೆ ಜಗತ್ತಿನಲ್ಲಿ ಕಾಣುವ ಪ್ರಾಣಿಹಿಂಸೆ ನೋವಿನ ಪ್ರಸಂಗವಾಗಿದೆ. "ಜಾಲಗಾರನೊಬ್ಬ ಜಲವ ಹೊಕ್ಕು ಶೋಧಿಸಿ ಹಲವು ಪ್ರಾಣಿಯ ಕೊಂದು, ನಲಿನಲಿದಾಡುವನು, ತನ್ನ ಮನೆಯಲೊಂದು ಶಿಶು ಸತ್ತಡೆ ಅದಕ್ಕೆ ಮರುಗುವಂತೆ ಅವಕ್ಕೇಕೆ ಮರುಗ?" ಎಂದು ಪ್ರಶ್ನಿಸುತ್ತಾಳೆ. ಸದಾಚಾರಿ ಶರಣರು ಪ್ರಾಣಿ ಹಿಂಸೆಯಲ್ಲಿ ತೊಡಗಬಾರದು ಎಂದು ಹೇಳುವ ಅಕ್ಕ 'ಜಾಲಗಾರನ ದುಃಖ ಜಗಕ್ಕೆಲ್ಲ ನಗೆಗೇಡೆ' ಎಂದು ಪರಿಹಾಸ್ಯ ಮಾಡುತ್ತಾಳೆ. ಧರ್ಮ, ಭಕ್ತಿ, ಶಬ್ದ ಪದಗಳ ಬಳಕೆಯಲ್ಲಿ ಕಾವ್ಯ ಲಕ್ಷಣ ನಿರೂಪಣೆಯ ವಿಧಾನವನ್ನು ಅಕ್ಕ ನಿರೂಪಿಸಿದ್ದಾಳೆ. ವಚನಗಳಲ್ಲಿ ಶಾಸ್ತ್ರ ಭಾಗವೂ ಉಂಟು, ಕಾವ್ಯ ಭಾಗವೂ ಉಂಟು; ಪ್ರಜ್ಞೆ, ಪ್ರತಿಭೆಗಳೊಡನೆ ಅನುನಯವೂ ಕೂಡಿದ್ದಾಗ ವಚನ ಪರಿಣಾಮಕಾರಿ ಯಾಗುತ್ತದೆ. ತತ್ತ್ವಬೋಧೆ ರಸಾತ್ಮಕವಾಗಿದ್ದು ಅನುಭವಾತ್ಮಕವೂ ಆಗಿರಬೇಕು. ಬಳಸುವ ಶಬ್ದ ನಯವಾಗಿರಬೇಕು. ಕನ್ನಡದ 'ನಯ' ಶಬ್ದಕ್ಕೆ ನುಣುಪು ನಾಜೂಕು ಎಂಬ ಅರ್ಥವಿದ್ದರೆ ಸಂಸ್ಕೃತದಲ್ಲಿ ಈ ಪದಕ್ಕೆ ನ್ಯಾಯ, ನೀತಿ, ಒಯ್ಯು ಎಂಬ ಅರ್ಥಗಳಿವೆ. ಕಾಣುವ ರೂಪಗಳನ್ನು ತನ್ನತ್ತ ಎಳೆದೊಯ್ಯುವುದರಿಂದ ಕಣ್ಣು 'ನಯನ' ಎನಿಸಿದೆ. ಅಂತೆಯೇ ಕಾವ್ಯದಲ್ಲಿ ಬಳಸುವ ಶಬ್ದ/ಪದಗಳು ನಯವಾಗಿದ್ದರೆ ಓದುಗರನ್ನು ತನ್ನತ್ತ ಸೆಳೆಯುತ್ತವೆ. ಈ ಕಾವ್ಯ ಲಕ್ಷಣವನ್ನು ಅಕ್ಕ ಅನುಸರಿಸಿರುವುದನ್ನು ಶ್ರೀ ಜಚನಿಯವರು ಇಲ್ಲಿ ಗುರುತಿಸಿದ್ದಾರೆ.

ಅಕ್ಕನ ಕಲ್ಯಾಣ ಯಾತ್ರೆಯನ್ನು ಚೈತ್ರಯಾತ್ರೆ ಎಂತಲೂ ಶ್ರೀಗಿರಿಯ ಪಯಣವನ್ನು ಚೈತ್ರಯಾತ್ರೆ ಎಂತಲೂ ಲೇಖಕರು ಹೆಸರಿಸಿದ್ದು ಕಲ್ಯಾಣದಲ್ಲಿ ಅಕ್ಕ ಎಲ್ಲರ ಮನಗೆದ್ದು ಅದನ್ನು ವಿಜಯ ಯಾತ್ರೆಯಾಗಿಸಿದಳು ಹಾಗೂ ಶ್ರೀಗಿರಿಯ ಪಯಣವನ್ನು ವಸಂತಕಾಲದ ಪಯಣವಾಗಿಸಿದಳು ಎಂದು ಆಕೆಯ ಬದುಕಿನ ಪಯಣವನ್ನು ಯಶಸ್ವೀ ಗೆಲವಿನ ಹಾಗೂ ವಸಂತದ ಸಂಭ್ರಮಕ್ಕೆ ಪ್ರತೀಕಗೊಳಿಸಿದ್ದಾರೆ. 'ಆಸೆ, ಆಮಿಷ ಅಳಿದಂಗಲ್ಲದೆ ಕಲ್ಯಾಣದತ್ತ ಅಡಿಯಿಡಬಾರದು' ಎಂದು ಕಲ್ಯಾಣದ ಅನುಭವ ಮಂಟಪದ ಅರಿವು ಆಚಾರ ನಿಷ್ಠೆಗಳ ಮಹತ್ವವನ್ನು ಉಲ್ಲೇಖಿಸಿದ್ದಾಳೆ. ಈ ಅರಿವಿನ ತೀವ್ರ ಎಚ್ಚರಿಕೆಯಲ್ಲಿ ಕಲ್ಯಾಣವನ್ನು ಪ್ರವೇಶಿಸಿ ಶರಣರ ದರ್ಶನಕ್ಕಾಗಿ ಉತ್ಸುಕತೆಯಿಂದ ಕಾಯುತ್ತಾಳೆ. 'ಕಲ್ಯಾಣ ಕೈಲಾಸವೆಂಬ ನುಡಿ ಹಸನಾಯಿತ್ತು, ಒಳಗೂ ಕಲ್ಯಾಣ ಹೊರಗೂ ಕಲ್ಯಾಣ' ಎಂಬ ನಿಷ್ಪಾಪೂರ್ಣ ಭಕ್ತಿಭಾವದಲ್ಲಿ, 'ಶಿವಭಕ್ತರೆ ಬಂಧುಗಳೆನಗೆ' ಎಂಬ ಅರ್ಪಣಾ ಮನೋಭಾವದಿಂದ ಎಲ್ಲರನ್ನು ಕಂಡು ಭಾವಪರವಶ ಳಾಗುತ್ತಾಳೆ. 'ಬಸವಣ್ಣನ ಭಕ್ತಿ, ಚನ್ನಬಸವಣ್ಣನ ಜ್ಞಾನ, ಮಡಿವಾಳಯ್ಯ ನಿಷ್ಠೆ, ಪ್ರಭುದೇವರ ಜಂಗಮ ಸ್ಥಲ, ಅಜಗಣ್ಣನ ಐಕ್ಯಸ್ಥಲ, ನಿಜಗುಣನ ಆರೂಢಸ್ಥಲ, ಸಿದ್ಧರಾಮಯ್ಯನ ಸಮಾಧಿ ಸ್ಥಲ, ಇಂತಿವರಕರುಣ ಪ್ರಸಾದ ಎನಗಾಯಿತ್ತು' ಎಂದು ಮನದುಂಬಿ ನಮಿಸುತ್ತಾಳೆ. ಆಕೆಯ ಜ್ಞಾನವನ್ನು ಪರೀಕ್ಷಿಸುವ ಪ್ರಭುದೇವರ ಪ್ರಶ್ನೆಗಳಿಗೆ ಸೂಕ್ತವಾದ ಉತ್ತರಗಳನ್ನು ಕೊಟ್ಟು ಶರಣರೆಲ್ಲರ ಹೃದಯವನ್ನು ಗೆಲ್ಲುತ್ತಾಳೆ. ಚೈತ್ರಯಾತ್ರೆಯಲ್ಲಿ ಗೆಲ್ಲುವೇ ಗೆಲುವು. ಅಲ್ಲಮ, ಬಸವಣ್ಣ, ಚನ್ನಬಸವಣ್ಣ ಎಲ್ಲರೂ ಆಕೆಯ ಜ್ಞಾನದ ನಿಲುವನ್ನು ಕಂಡು ಮೆಚ್ಚಿ ಆಕೆಯ ಮುಂದಿನ ಚೈತ್ರಯಾತ್ರೆಗೆ ಅನುವು ಮಾಡಿಕೊಡುತ್ತಾರೆ. ಅಕ್ಕ ಪ್ರಭುದೇವರಿಂದ ತನ್ನ ಮುಂದಿನ ನಿಜದ ನೆಲೆಯ ತಾವನ್ನು ಸೇರುವ ಬಗ್ಗೆ ನಿರ್ದೇಶನ ಪಡೆದು ಕಲ್ಯಾಣದಿಂದ ಹೊರಟು ಕದಳಿಯ ಬನವನ್ನು ಸೇರುತ್ತಾಳೆ. ಉದ್ದಕ್ಕೂ ಚೈತ್ರದ ಚೆಲುವನ್ನು ಕಾಣುತ್ತಾಳೆ. ಆ ಚೆಲುವಿನಲ್ಲಿ ತನ್ನ ಚನ್ನನನ್ನು ಕಾಣುತ್ತಾಳೆ; ಚನ್ನನಲ್ಲಿ ಒಂದಾಗುತ್ತಾಳೆ. ಜ್ಞಾನ ಕ್ರಿಯೆಗಳ ಅನುಭವಾಮೃತ ವನ್ನು ತನ್ನದಾಗಿಸಿಕೊಳ್ಳುತ್ತಾಳೆ. ತನ್ನ ಅಂತಿಮ ನೆಲೆಗೆ ಮಾರ್ಗದರ್ಶನ ನೀಡಿದ ಗುರು ಅಲ್ಲಮನನ್ನು ನೆನೆದು '...ನಿಃಕಳಂಕ ಸದ್ಗುರು ಪ್ರಭುದೇವರ ಸತ್ಯದ ಸೊಸೆ' ತಾನಾದೆ ಎಂಬ ಪೂರ್ಣಭಾವದಲ್ಲಿ ಚನ್ನ ಮಲ್ಲಿಕಾರ್ಜುನನ ಅರ್ಧಾಂಗಿಯ ರೂಪದಲ್ಲಿ ತನ್ಮಯಳಾಗುತ್ತಾಳೆ. ತನ್ನ ಪತಿಯ ತಂದೆ ಪ್ರಭುದೇವರು, ಅವರ ಸೊಸೆ ತಾನು ಎಂದು ಭಾವಿಸಿ ಸತ್ಯದ ಹಾದಿಯಲ್ಲಿ ಭಕ್ತಿಸಾಧನೆ ಮಾಡಿ 'ಸತ್ಯದಸೊಸೆ' ತಾನು ಎಂಬುದನ್ನು ಸಾರ್ಥಕಪಡಿಸಿಕೊಳ್ಳುತ್ತಾಳೆ. ಚನ್ನಮಲ್ಲಿಕಾರ್ಜುನನನ್ನು ಪಡೆಯಲು ಮಾಧ್ಯಮಿಕ ಚೇತನವಾದ ಪ್ರಭುದೇವರು ಅಕ್ಕನನ್ನು ಕುರಿತು, 'ತನ್ನನರಿದ ನಿಜಶಕ್ತಿಯ ನೋಡಾ' ಎಂದು 'ಮಹಾದೇವಿಯಕ್ಕನ ಪಾದಂಗಳಿಗೆ ನಮೋ ನಮೋ ಎನುತಿರ್ದೆನು' ಎಂದು ಅಕ್ಕನ ನಿಜಶಕ್ತಿಯನ್ನು ನೋಡಿ ಬೆರಗಾಗಿದ್ದಾರೆ.



# ಮಾಜಿ ಸಚಿವ ಶ್ರೀ ಸಿ. ಚೆನ್ನಿಗಪ್ಪನವರು ವಿಧಿವಶ



ಸರಳತೆ, ಸಜ್ಜನಿಕೆಯನ್ನು ಮೈಗೂಡಿಸಿಕೊಂಡಿದ್ದ ಅವರೊಬ್ಬ ರಾಜಕಾರಣಿ. ಮಾಜಿ ಸಚಿವ ಶ್ರೀ ಸಿ. ಚೆನ್ನಿಗಪ್ಪನವರು ಫೆಬ್ರವರಿ ೨೨ ರಂದು ಶಿವರಾತ್ರಿ ಹಬ್ಬದ ದಿನ ವಿಧಿವಶರಾದರು. ಅವರಿಗೆ ೭೬ ವರ್ಷವಾಗಿತ್ತು. ಪತ್ನಿ ಶ್ರೀಮತಿ ಸಿದ್ಧಗಂಗಮ್ಮ. ತುಮಕೂರು ಗ್ರಾಮಾಂತರ ವಿಧಾನಸಭಾ ಕ್ಷೇತ್ರದ ಶಾಸಕರಾದ ಶ್ರೀ ಡಿ.ಸಿ. ಗೌರಿಶಂಕರ್ ಸೇರಿದಂತೆ ಮೂವರು ಪುತ್ರರನ್ನು ಹಾಗೂ ಅಪಾರ ಬಂಧು ಬಳಗವನ್ನು ಅಗಲಿದ್ದಾರೆ. ಅವರ ನಿಧನಕ್ಕೆ ಸಿದ್ಧಗಂಗಾ ವಿಷಾದವನ್ನು ವ್ಯಕ್ತಪಡಿಸುತ್ತದೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆ ನೆಲಮಂಗಲ ತಾಲ್ಲೂಕಿನ ಭೈರನಾಯಕನಹಳ್ಳಿಯಲ್ಲಿ ಜನಿಸಿದ ಶ್ರೀ ಚೆನ್ನಿಗಪ್ಪ ಅವರು ಪ್ರೌಢಶಿಕ್ಷಣವನ್ನು ಶ್ರೀ ಸಿದ್ಧಗಂಗಾ ವಿದ್ಯಾ ಸಂಸ್ಥೆಯ ಆಶ್ರಯದಲ್ಲಿ ನಡೆಯುತ್ತಿರುವ ಪುರುಷನಹಳ್ಳಿ ಪ್ರೌಢಶಾಲೆಯಲ್ಲಿ ಪಡೆದರು. ಶ್ರೀ ಸಿದ್ಧಗಂಗಾ ಮಠ ಹಾಗೂ ನಡೆದಾಡುವ ದೇವರು, ಪದ್ಮಭೂಷಣ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರಲ್ಲಿ ಅನನ್ಯ ಭಕ್ತಿ ಗೌರವವನ್ನಿಟ್ಟುಕೊಂಡಿದ್ದ ಅವರು ಪೂಜ್ಯ ಶ್ರೀಗಳವರ ದಿವ್ಯಾಶೀರ್ವಾದದ ಮುಂಬೆಳಕಿನಲ್ಲಿ ತಮ್ಮ ಭವಿಷ್ಯವನ್ನು ರೂಪಿಸಿಕೊಂಡ ಭಾಗ್ಯಶಾಲಿಗಳು. ಭೈರನಾಯಕನಹಳ್ಳಿಯಲ್ಲಿ ತಾವು ಸ್ಥಾಪಿಸಿದ ತಾಂತ್ರಿಕ ಮಹಾವಿದ್ಯಾಲಯಕ್ಕೆ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಹೆಸರಿಡುವುದರ ಮೂಲಕ ತಮ್ಮ ಭಕ್ತಿಯನ್ನು ಸಮರ್ಪಿಸಿದ್ದರು.

ಪೊಲೀಸ್ ಇಲಾಖೆಯಲ್ಲಿ ಪೊಲೀಸ್ ಕಾನ್‌ಸ್ಟೇಬಲ್ ಆಗಿ ವೃತ್ತಿ ಜೀವನವನ್ನು ಪ್ರಾರಂಭಿಸಿದ ಶ್ರೀಯುತರು ರಾಜಕೀಯ ಕ್ಷೇತ್ರದ ಒಲವಿನಿಂದ ಸರ್ಕಾರಿ ಕೆಲಸಕ್ಕೆ ವಿದಾಯ ಹೇಳಿ ೧೯೯೯ ರಲ್ಲಿ ರಾಜಕೀಯ ಕ್ಷೇತ್ರ ಪ್ರವೇಶಿಸಿ ಕೊರಟಗೆರೆ ವಿಧಾನಸಭಾ ಕ್ಷೇತ್ರದಿಂದ ಮೂರು ಬಾರಿ ಜಯಶೀಲರಾಗಿ ೨೦೦೪ ರಲ್ಲಿ ಶ್ರೀ ಎನ್. ಧರ್ಮಸಿಂಗ್ ನೇತೃತ್ವದ ಕಾಂಗ್ರೆಸ್-ಜೆಡಿಎಸ್ ಮೈತ್ರಿ ಸರ್ಕಾರದಲ್ಲಿ ಅಬಕಾರಿ, ರೇಷ್ಮೆ ಖಾತೆಯ ಸಂಪುಟ ದರ್ಜೆಯ ಸಚಿವರಾಗಿ ಸೇವೆ ಸಲ್ಲಿಸಿದರು. ೨೦೦೬ ರಲ್ಲಿಯೂ ಬಿಜೆಪಿ-ಜೆಡಿಎಸ್ ಮೈತ್ರಿಕೂಟದ ಸರ್ಕಾರದಲ್ಲಿ ಅರಣ್ಯ, ಪರಿಸರ ಖಾತೆಯ ಸಚಿವರಾಗಿ, ತುಮಕೂರು ಜಿಲ್ಲಾ ಉಸ್ತುವಾರಿ ಸಚಿವರಾಗಿಯೂ ದಕ್ಷತೆಯಿಂದ ಕಾರ್ಯನಿರ್ವಹಿಸಿದ್ದರು.

ಶ್ರೀಮಠದಲ್ಲಿ ನಡೆದ ಪರಮಪೂಜ್ಯರ ವಜ್ರ ಮಹೋತ್ಸವ, ಅಮೃತ ಮಹೋತ್ಸವ, ಶತಮಾನೋತ್ಸವ ಸಮಾರಂಭಗಳಲ್ಲಿ ಭಾಗವಹಿಸಿ ನುಡಿನಮನಗಳನ್ನು ಸಲ್ಲಿಸಿ, ಪೂಜ್ಯ ಶ್ರೀಗಳವರ ಆಶೀರ್ವಾದ ಪಡೆದಿದ್ದರು.

ಶ್ರೀ ಸಿ. ಚೆನ್ನಿಗಪ್ಪ ಅವರ ಅಂತ್ಯಕ್ರಿಯೆ ಅವರ ಹುಟ್ಟೂರಾದ ಭೈರನಾಯಕನಹಳ್ಳಿಯಲ್ಲಿ ಫೆಬ್ರವರಿ ೨೩ ರಂದು ನಡೆಯಿತು. ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು, ಕೇಂದ್ರ ಸಚಿವ ಶ್ರೀ ಸದಾನಂದಗೌಡ, ನೆಲಮಂಗಲ ಶಾಸಕ ಡಾ. ಶ್ರೀನಿವಾಸಮೂರ್ತಿ ಮೊದಲಾದ ಗಣ್ಯರು ಅಂತಿಮ ದರ್ಶನ ಪಡೆದರು. ಮೃತರ ಆತ್ಮಕ್ಕೆ ಚಿರಶಾಂತಿಯನ್ನು, ಅವರ ಅಗಲಿಕೆಯ ನೋವನ್ನು ಸಹಿಸುವ ಶಕ್ತಿಯನ್ನು ಅವರ ಕುಟುಂಬದವರಿಗೆ ಶ್ರೀ ಸಿದ್ಧಗಂಗಾ ಗುರುಪರಂಪರೆ ನೀಡಲಿ ಎಂದು ಸಿದ್ಧಗಂಗಾ ಪ್ರಾರ್ಥಿಸುತ್ತದೆ.

### ಚೇತನಸ್ವರೂಪಿ, ಮಹಾಯೋಗಿನಿ

# ಮಾತಾಜಿ ಮಾಣಿಕೇಶ್ವರಿಯವರು ಲಿಂಗೈಕ್ಯ



ಕರ್ನಾಟಕ, ಮಹಾರಾಷ್ಟ್ರ, ಆಂಧ್ರ ಪ್ರದೇಶ, ತೆಲಂಗಾಣ ರಾಜ್ಯಗಳಲ್ಲಿ ಲಕ್ಷಾಂತರ ಭಕ್ತರನ್ನು ಹೊಂದಿದ್ದ ಮಹಾಯೋಗಿನಿ, ಅಹಿಂಸೆಯ ರಾಯಭಾರಿ ಎಂಬ ಹೆಗ್ಗಳಿಕೆಗೆ ಪಾತ್ರರಾಗಿದ್ದ ಮಾತಾಜಿ ಮಾಣಿಕೇಶ್ವರಿ ಅವರು ಮಾರ್ಚ್ ೭ ರಂದು ಶಿವನೊಳಗೊಂದಾದರು. ಲಕ್ಷಾಂತರ ಭಕ್ತರು ಆಗಮಿಸಿ ಮಾತೆ ಶಿವಚರಣಗಳಿಗೆ ಅಶ್ರುತರ್ಪಣ ಅರ್ಪಿಸಿ ಅಂತಿಮ ಭಕ್ತಿ ನಮನ ಸಲ್ಲಿಸಿದರು.

ಜನನ: ಸೇಡಂ ತಾಲೂಕಿನ ಗಡಿ ಪ್ರದೇಶದ ಮಲ್ಲಾಬಾದ್‌ನಲ್ಲಿ ರೈತ ದಂಪತಿಗಳಾದ ಶರಣ ಬುಗ್ಗಪ್ಪ ಮತ್ತು ಆಶಮ್ಮ ಅವರ ಪುತ್ರಿಯಾಗಿ ೧೯೩೪ ರಲ್ಲಿ ಜನಿಸಿದರು. ಬಾಲ್ಯದಿಂದಲೇ ಆಧ್ಯಾತ್ಮಿಕ ಒಲವನ್ನು ರೂಢಿಸಿಕೊಂಡು ಸದಾ ಶಿವನ ಧ್ಯಾನದಲ್ಲಿ ತೊಡಗಿಸಿಕೊಂಡಿದ್ದರು. ಬಾಲ್ಯ ವಿವಾಹ ಮಾಡುತ್ತಿದ್ದ ಆ ಕಾಲದಲ್ಲಿ ತಂದೆ ತಾಯಿಗಳು ತಮ್ಮ ಕರ್ತವ್ಯವನ್ನು ಮುಗಿಸಬೇಕೆಂದು ೯ನೇ ವಯಸ್ಸಿಗೆ ಬಲವಂತವಾಗಿ ಶಿಲಾರಕೋಟದ ಮಾಣಿಕಪ್ಪ ಜೊತೆ ಮದುವೆ ಮಾಡಿದರು. ೧೧ನೇ ವಯಸ್ಸಿಗೆ ಗಂಡನ ಮನೆಯವರು ಕರೆದುಕೊಂಡು ಹೋಗಲು ಬಂದರು. ಇಷ್ಟವಿಲ್ಲದವನ ಜೊತೆ ಬಾಳುವುದಕ್ಕಿಂತ ಸಾಯುವುದೇ ಮೇಲು ಎಂದು ನಿರ್ಧರಿಸಿ, ತಂದೆ ತಾಯಿಯರ ಮಾತನ್ನು ಮೀರಿ ಅನ್ನ ನೀರು ಬಿಟ್ಟರು. ಶಿವನ ನಾಮಸ್ಮರಣೆ ಮಾಡುತ್ತಾ ಶಿವನ ಪಾದ ಸೇರಬೇಕೆಂಬ ತುಡಿತದಿಂದ ಕಾಡು ಸೇರಿದರು. ಕಾಡು ಮೇಡುಗಳಲ್ಲಿ ಅಲೆಯುತ್ತಾ ೧೪ನೇ ವಯಸ್ಸಿನಲ್ಲಿ ನಿರ್ಜನ ಪ್ರದೇಶವಾದ ಯಾನಾಗುಂದಿ ಬೆಟ್ಟದ ಮರಗಳ ಮೇಲೆ ಧ್ಯಾನಸಕ್ತರಾಗಿ ಹಗಲು, ರಾತ್ರಿಗಳನ್ನು ಕಳೆದು ಕಠೋರ ತಪಸ್ಸು ಮಾಡುವ ಮಹಾಯೋಗಿನಿ ಎನಿಸಿಕೊಂಡರು. ಶಿವಸ್ವರೂಪಿಣಿ ಮಹಾಮಾತಾ ಮಾಣಿಕೇಶ್ವರಿ ಅವರ ದರ್ಶನವೇ ಜೀವನದ ಭಾಗ್ಯವೆಂದು ಭಾವಿಸಿದ ಭಕ್ತರು ಅವರ ದರ್ಶನಕ್ಕಾಗಿ ಕಾದು ದರ್ಶನ ಮಾಡಿದ ಧನ್ಯತೆಯನ್ನು ಪಡೆಯುತ್ತಿದ್ದರು. ವರ್ಷದಲ್ಲಿ ಒಂದೆರೆಡು ಬಾರಿ ಭಕ್ತರಿಗೆ ದರ್ಶನ ನೀಡುತ್ತಿದ್ದರು. ಉಳಿದಂತೆ ಗವಿಯಲ್ಲಿ ಶಿವಯೋಗಾನುಷ್ಠಾನದಲ್ಲಿ ತಮ್ಮನ್ನು ಅರ್ಪಿಸಿಕೊಂಡಿದ್ದರು. ಅವರ ದರ್ಶನ ಪಡೆಯಲು ಕರ್ನಾಟಕ, ಆಂಧ್ರ, ಮಹಾರಾಷ್ಟ್ರದ ವಿವಿಧ ಭಾಗಗಳಿಂದ ಜನಸಾಗರವೇ ಹರಿದುಬರುತ್ತಿತ್ತು. ಬೇಡಿದವರ ಇಷ್ಟಾರ್ಥಗಳು ಸಿದ್ಧಿಸುವಂತೆ ಆಶೀರ್ವಾದ ಮಾಡುತ್ತಿದ್ದರು. ನಂಬಿ ಬಂದ ಭಕ್ತರನ್ನು ಪೊರೆಯುವ ಚೈತನ್ಯ ಸ್ವರೂಪಿಣಿಯಾಗಿದ್ದರು. ಹಲವಾರು ಪವಾಡಗಳನ್ನು ಮಾಡುವುದರ ಮೂಲಕ ಭಕ್ತರನ್ನು ಸನ್ಮಾರ್ಗದಲ್ಲಿ ನಡೆಯುವಂತೆ ಮಾಡಿದ ಅಹಿಂಸೆಯ ರಾಯಭಾರಿಯಾಗಿದ್ದರು.

ಬಿರು ಬೇಸಿಗೆಯಲ್ಲಿಯೂ ಮಾರ್ಚ್ ೯ರ ಸೋಮವಾರ ಮುಂಜಾನೆಯಿಂದ ಸುಮಾರು ೩ ಗಂಟೆಗಳ ಕಾಲ ಯಾನಗುಂದಿ ಸುತ್ತ ಬಿರುಸಿನ ಮಳೆಯಾಯಿತು. ಭಕ್ತರು ಮಳೆಯನ್ನು ಲೆಕ್ಕಿಸದೆ ದರ್ಶನ ಪಡೆದುದು ವಿಶೇಷವಾಗಿತ್ತು. ಅಲ್ಲದೆ ಸಮಾಧಿ ನಡೆಯುವ ಸಂದರ್ಭದಲ್ಲಿ ಸರ್ಪವೊಂದು ಪ್ರತ್ಯಕ್ಷವಾಗಿ ಹೆಡೆ ಎತ್ತಿ ಅಲುಗಾಡದೆ ಇದ್ದುದು ಅಲ್ಲಿ ಸೇರಿದ್ದ ಭಕ್ತರಿಗೆ ಪವಾಡವೆನಿಸಿತು.

'ಅಹಿಂಸಾ ಪರಮೋಧರ್ಮ' ಎನ್ನುತ್ತಲೇ ಭಕ್ತರನ್ನು ಕಷ್ಟಗಳಿಂದ ದೂರವಾಗಿಸಿ ಸನ್ಮಾರ್ಗದಲ್ಲಿ ನಡೆಸುವ ಕಾಯಕದಲ್ಲಿ ತಮ್ಮನ್ನು ಅರ್ಪಿಸಿಕೊಂಡಿದ್ದ ಮಾತೆ ಮಾಣಿಕೇಶ್ವರಿ ಅವರು ಏಳು ದಶಕಗಳಿಂದ ಶಿವಧ್ಯಾನ ಮಾಡುತ್ತಿದ್ದ ಯಾನಗುಂದಿ ಬೆಟ್ಟದಲ್ಲಿ ಶಾಶ್ವತವಾಗಿ ಶಿವನಲ್ಲಿ ಲೀನವಾದರು. ವೀರಶೈವ ಲಿಂಗಾಯಿತ ಧರ್ಮದ ವಿಧಿ ವಿಧಾನಗಳಂತೆ ಅರ್ಚಕರ ವೇದಘೋಷ ಮಂತ್ರಗಳೊಂದಿಗೆ ಮಾತೆಯ ಇಚ್ಛೆಯಂತೆ ನಿರ್ಮಿಸಿಕೊಂಡಿದ್ದ ಸಮಾಧಿಯಲ್ಲಿ ಅಂತ್ಯಸಂಸ್ಕಾರ ಲಕ್ಷಾಂತರ ಭಕ್ತರ ಸಮ್ಮುಖದಲ್ಲಿ, ಸರ್ಕಾರದ ಸಕಲ ಗೌರವಗಳೊಂದಿಗೆ ಮಾರ್ಚ್ ೧೦ ರಂದು ಕ್ರಿಯಾ ಸಮಾಧಿ ಮಾಡಲಾಯಿತು.

ಸಿದ್ಧಗಂಗಾ ಪೂಜ್ಯ ಮಹಾಮಾತೆಯವರ ಶಿವಚರಣಗಳಿಗೆ ಭಕ್ತಿ ಪುಷ್ಪಗಳನ್ನು ಅರ್ಪಿಸುತ್ತದೆ.



### ಶ್ರೇಷ್ಠ ಸಂಶೋಧಕ, ಇತಿಹಾಸ ತಜ್ಞ

# ಡಾ. ಷಡಕ್ಷರಿ ಶೆಟ್ಟರ್ ವಿಧಿವಶ



ಇತಿಹಾಸ, ಪ್ರಾಕ್ತನಶಾಸ್ತ್ರ, ಮಾನವಶಾಸ್ತ್ರ, ಕಲಾ ಇತಿಹಾಸ, ದರ್ಶನ ಶಾಸ್ತ್ರ ಮತ್ತು ಹಳಗನ್ನಡ ಕಾವ್ಯ ಕ್ಷೇತ್ರದಲ್ಲಿ ಅಪಾರವಾದ ಪಾಂಡಿತ್ಯವನ್ನು ಗಳಿಸಿದ್ದು ಹಲವಾರು ಶ್ರೇಷ್ಠ ಗ್ರಂಥಗಳನ್ನು ನೀಡಿ ಸಾಹಿತ್ಯ ಕ್ಷೇತ್ರವನ್ನು ಶ್ರೀಮಂತಗೊಳಿಸಿದ್ದ ವಿದ್ವತ್ ಗಣಿ, ಅಪರೂಪದ ವಿದ್ವಾಂಸ, ಡಾ. ಷಡಕ್ಷರಿ ಶೆಟ್ಟರ್ ಅವರು ಫೆಬ್ರವರಿ ೨೮ ರಂದು ತಮ್ಮ ೮೫ನೇ ವಯಸ್ಸಿನಲ್ಲಿ ವಿಧಿವಶರಾದರು. ಅವರ ನಿಧನಕ್ಕೆ ಸಿದ್ಧಗಂಗಾ ಸಂತಾಪವನ್ನು ವ್ಯಕ್ತಪಡಿಸುತ್ತದೆ. ಈ ಎರಡು ತಿಂಗಳ ಅವಧಿಯಲ್ಲಿ ಡಾ. ಎಂ. ಚಿದಾನಂದಮೂರ್ತಿ ಹಾಗೂ ಡಾ. ಷ. ಶೆಟ್ಟರ ಇಬ್ಬರು ಸಾಹಿತ್ಯ ದಿಗ್ಗಜಗಳನ್ನು ಕಳೆದುಕೊಂಡು ಕನ್ನಡ ಸಾಹಿತ್ಯ, ಸಂಶೋಧನ ಕ್ಷೇತ್ರಕ್ಕೆ ಭರಿಸಲಾಗದ ನಷ್ಟವಾಗಿದೆ.

ಬಳ್ಳಾರಿ ಜಿಲ್ಲೆ ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಹಂಪಸಾಗರದಲ್ಲಿ ೧೯೩೫ರಲ್ಲಿ ಜನಿಸಿದ ಷ. ಶೆಟ್ಟರ್ ಅವರು ಹುಟ್ಟಿದೂರಿನಲ್ಲಿ ಸರ್ಕಾರಿ ಶಾಲೆಯಲ್ಲಿ ಪ್ರಾಥಮಿಕ ಶಿಕ್ಷಣ, ಮೈಸೂರು, ಧಾರವಾಡ ಮತ್ತು ಕೇಂಬ್ರಿಜ್‌ನಲ್ಲಿ ಉನ್ನತ ವ್ಯಾಸಂಗವನ್ನು ಪಡೆದರು. ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದ್ದ ಶೆಟ್ಟರ ಅವರು ಬೆಂಗಳೂರಿನ ನ್ಯಾಷನಲ್ ಇನ್‌ಸ್ಟಿಟ್ಯೂಟ್ ಆಫ್ ಅಡ್ವಾನ್ಸ್ ಸ್ಟಡೀಸ್ ಎಮಿರಟಸ ಪ್ರಾಧ್ಯಾಪಕರಾಗಿ, ಹಲವಾರು ಇತಿಹಾಸ ಸಂಸ್ಥೆಗಳ ನಿರ್ದೇಶಕರಾಗಿ ದಕ್ಷತೆಯಿಂದ ಪ್ರಾಮಾಣಿಕವಾಗಿ ಕಾರ್ಯನಿರ್ವಹಿಸಿದ ಹೆಗ್ಗಳಿಕೆಗೆ ಪಾತ್ರರಾಗಿದ್ದರು.

ದ್ರಾವಿಡ ಭಾಷೆಗಳಲ್ಲಿ ಮೊದಲು ಪ್ರಕಟವಾಗಿರುವುದು ತಮಿಳು ಎಂಬ ಕೆಲವು ವಿದ್ವಾಂಸರ ನಂಬಿಕೆಯನ್ನು ತಮ್ಮ ತಲಸ್ಪರ್ಶಿ ಅಧ್ಯಯನ, ಸಂಶೋಧನೆಯ ಮೂಲಕ ಸಾಬೀತುಗೊಳಿಸಿದ, ಶ್ರೇಷ್ಠ ಸಂಶೋಧಕರು. ತಮಿಳಿಗಿಂತ ಮೊದಲೇ ಕನ್ನಡ ಲಿಪಿ ಅಸ್ತಿತ್ವದಲ್ಲಿತ್ತೆಂಬುದನ್ನು ತಮ್ಮ 'ಶಂಗಂ ತಮಿಳಗಂ' ಮತ್ತು ಕನ್ನಡ ನಾಡು ನುಡಿ ಮತ್ತು ಹಳೆಗನ್ನಡ ಲಿಪಿ, ಲಿಪಿಕಾರ, ಲಿಪಿ ವ್ಯವಸಾಯ ಕೃತಿಗಳ ಮೂಲಕ ಸಾಹಿತ್ಯ ಲೋಕಕ್ಕೆ ತೋರಿಸಿ ಕೊಡುವುದರ ಮೂಲಕ ಮೊದಲ ನಂಬಿಕೆಯನ್ನು ಹುಸಿ ಎಂದು ದಾಖಲೆಗಳೊಂದಿಗೆ ತೋರಿಸಿಕೊಟ್ಟ ಶ್ರೇಷ್ಠ ವಿದ್ವಾಂಸರು.

ಕನ್ನಡ ನಾಡು, ನುಡಿಯ ಬಗ್ಗೆ ಅಪಾರವಾದ ಪ್ರೀತಿ, ಅಭಿಮಾನ, ಕಳಕಳಿಯನ್ನು ಹೊಂದಿದ್ದ ಡಾ. ಶೆಟ್ಟರ್ ಅವರು ಕನ್ನಡ ಶಾಸ್ತ್ರೀಯತೆ ಬಗ್ಗೆ ಮಾತನಾಡುವಾಗ, ತಾವು ಅಧ್ಯಯನ ಮಾಡಿ ಬರೆದ ಕೃತಿಗಳು ಆಕರ ಎಂದು ಅಭಿಮಾನದಿಂದ ಹೇಳಿಕೊಂಡಿದ್ದರು. ಆ ಮಾತು ಹೃದಯದಿಂದ ಮೂಡಿ ಬಂದ ಸ್ವಾಭಿಮಾನದ ಮಾತಾಗಿತ್ತು. ಆ ಸಂದರ್ಭದಲ್ಲಿ ಅವರು ಹೇಳಿದ್ದ ಮಾತುಗಳು ಕನ್ನಡಿಗರಿಗೆ, ಸರ್ಕಾರಕ್ಕೆ ಹೇಳಿದ ಎಚ್ಚರಿಕೆಯ ಮಾತುಗಳಾಗಿದ್ದವು. ತಮಿಳರಿಗೆ ಇರುವ ಭಾಷಾಭಿಮಾನ, ಕನ್ನಡಿಗರಿಗೆ ಕರ್ನಾಟಕ ಸರ್ಕಾರಕ್ಕೆ ಇಲ್ಲದಿರುವುದರ ಕಾರಣ ಕನ್ನಡ ಭಾಷಾ ಸಂಶೋಧನೆಯಲ್ಲಿ ಮತ್ತು ಸ್ಥಾನಮಾನ ಪಡೆಯುವಲ್ಲಿ ಹಿನ್ನಡೆಯಾಗಿದೆ ಎಂದು ಹೇಳಿದ್ದರು. ಅವರ ಮಾತನ್ನು ಮತ್ತೊಬ್ಬ ಶ್ರೇಷ್ಠ ಸಂಶೋಧಕರಾಗಿದ್ದ ಡಾ. ಎಂ. ಚಿದಾನಂದಮೂರ್ತಿಯವರು ಅನುಮೋದಿಸಿದ್ದರು. ಸಂಶೋಧನೆಯ ಬಗ್ಗೆ ಸದಾ ಚಿಂತನೆ ಮಾಡುತ್ತಿದ್ದ ಷ. ಶೆಟ್ಟರ್ ಅವರು ಮಿತಭಾಷಿಯಾಗಿದ್ದರು. ಆದರೆ ಕನ್ನಡ ನಾಡು, ನುಡಿ ವಿಷಯ ಬಂದಾಗ ಮುಕ್ತವಾಗಿ ಮನಸ್ಸು ಬಿಚ್ಚಿ ಯಾವುದೇ ಮುಲಾಜಿಲ್ಲದೆ ತಮ್ಮ ಭಾವನೆಗಳನ್ನು ಹಂಚಿಕೊಳ್ಳುತ್ತಿದ್ದರು. ಡಾ. ಶೆಟ್ಟರ್ ಅವರನ್ನು ಕುರಿತು ಶ್ರೇಷ್ಠ ಸಂಶೋಧಕರಾಗಿದ್ದ ಡಾ. ಎಂ.ಎಂ. ಕಲಬುರ್ಗಿಯವರು "ಲಭ್ಯವಿರುವ ಶಾಸನಗಳನ್ನು ಮರುಶೋಧನೆಗೆ ಒಳಪಡಿಸಿ ಸಂಖ್ಯಾನಿಷ್ಠ ಸಂಶೋಧನೆ ಕೈಗೊಂಡ ಶ್ರೇಷ್ಠ' ಎಂಬ ಮುಕ್ತ ಮನಸ್ಸಿನ ಪ್ರಶಂಸೆ, ಒಬ್ಬ ವಿದ್ವಾಂಸ, ಮತ್ತೊಬ್ಬ ವಿದ್ವಾಂಸರಿಗೆ ನೀಡಿದ ಮಹೋನ್ನತ ನುಡಿ ಗೌರವವಾಗಿದೆ.

**ಪ್ರಕಟಿತ ಗ್ರಂಥಗಳು :**

ಡಾ. ಷಡಕ್ಷರಿ ಶೆಟ್ಟರ್ ಅವರು ೩೦ಕ್ಕೂ ಹೆಚ್ಚು ವಿದ್ವತಪೂರ್ಣ ಮೌಲಿಕ ಗ್ರಂಥಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ಕೆಲವನ್ನಾದರೂ ಹೆಸರಿಸುವುದಾದರೆ ಶ್ರವಣಬೆಳಗೊಳ ರೂವಾರಿ, ಸಾರಿಗೆ ಆಹ್ವಾನ, ಶಂಗಂ ತಮಿಳಗಂ ಮತ್ತು ಕನ್ನಡ ನಾಡು–ನುಡಿ (ಆರಂಭ ಕಾಲದ ದ್ರಾವಿಡ ಭಾಷಾ ಚಿಂತನೆ), ಸೋಮನಾಥಪುರ, ಬಾದಾಮಿ ಚಾಲುಕ್ಯರ ಶಾಸನ ಸಾಹಿತ್ಯ,

ಸಾವನ್ನು ಅರಿಸಿ, ಸಾವನ್ನು ಸ್ವಾಗತಿಸಿ, ಹಳಗನ್ನಡ ಲಿಪಿಕಾರ, ಲಿಪಿ ವ್ಯವಸಾಯ, ಹಳಗನ್ನಡ ಭಾಷೆ-ಭಾಷಾ ಬೆಳವಣಿಗೆ, ಭಾಷಾ ಬಾಂಧವ್ಯ, ಪ್ರಾಕೃತ ಜಗದ್ವಲಯ (ಪಾಕೃತ, ಕನ್ನಡ ಮತ್ತು ಸಂಸ್ಕೃತ ಭಾಷೆಗಳ ಅನುಸಂಧಾನ) ಮೊದಲಾದ ಕೃತಿಗಳನ್ನು ಸಾಹಿತ್ಯ ಕ್ಷೇತ್ರಕ್ಕೆ ಕೊಡುಗೆಯಾಗಿ ನೀಡಿದ್ದಾರೆ. ಇವುಗಳ ಜೊತೆಗೆ ಕೆಲವು ಇಂಗ್ಲಿಷ್ ಕೃತಿಗಳನ್ನು ರಚಿಸಿದ್ದಾರೆ.

Hoysala Sculpture in the National Museum, Copenhagen ಸೇರಿ ೧೦ ಇಂಗ್ಲಿಷ್ ಕೃತಿಗಳು ಪ್ರಕಟವಾಗಿದ್ದು, Archaeological Survey of Mysore, Annual Reports Vol II-IV, Dharwad ಸೇರಿ ೬ ಕೃತಿಗಳನ್ನು ಸಂಪಾದಿಸಿ ಕೊಟ್ಟಿದ್ದಾರೆ.

ಇವುಗಳ ಜೊತೆಗೆ ಅನೇಕ ಸಂಶೋಧನಾ ಪ್ರಬಂಧಗಳು ಜಾಗತಿಕ ಖ್ಯಾತಿಯ ನಿಯತಕಾಲಿಕೆಗಳಲ್ಲಿ ಪ್ರಕಟಗೊಂಡಿವೆ. ಪ್ರಾಕೃತ, ಸಂಸ್ಕೃತ, ದ್ರಾವಿಡ ಭಾಷೆಗಳ ಇತಿಹಾಸ ಮತ್ತು ಅಂತರ ಸಂಬಂಧ ಕುರಿತ ಸಮಗ್ರವಾಗಿ, ತುಲನಾತ್ಮಕವಾಗಿ ಮಾತನಾಡುತ್ತಿದ್ದರು. ಅವರಲ್ಲಿದ್ದ ಅಸಾಧಾರಣ ವಿದ್ವತ್ತನ್ನು ಮನಗೊಂಡು ಮೆಲ್ಬೋರ್ನ್‌ನಲ್ಲಿ ನಡೆದ ವಿಶ್ವಸಂಸ್ಕೃತ ಸಮ್ಮೇಳನದ ಅಧ್ಯಕ್ಷ ಗೌರವವನ್ನು ನೀಡಿದ್ದರು. ಈ ಗೌರವದ ಜೊತೆಗೆ ಅನೇಕ ದೇಶ ವಿದೇಶಗಳು ಪ್ರಶಸ್ತಿಗಳನ್ನು ನೀಡಿ ಸನ್ಮಾನಿಸಿ ಗೌರವಿಸಿರುವುದು ಅವರ ವಿದ್ವತ್‌ಗೆ ಸಂದ ಗೌರವವಾಗಿದೆ. ಅವರೊಬ್ಬ ಶ್ರೇಷ್ಠ ವಿದ್ವಾಂಸರಾಗಿದ್ದರೂ 'ಅಹಂ' ಅವರತ್ತ ಸುಳಿಯದಂತೆ ಸದಾ ಜಾಗೃತ ರಾಗಿದ್ದರು, ಸರಳತೆ, ಸಜ್ಜನಿಕೆ, ಅವರ ಜೊತೆಗಾರ ರಾಗಿದ್ದವು. ಸ್ಥಳ ನಾಮ ಮತ್ತು ರೂಪನಿಷ್ಪತ್ತಿ ಕುರಿತ ಅವರ ಸಂಶೋಧನೆಗಳ ಬಗ್ಗೆ ವಿದ್ವತ್ ವಲಯದಲ್ಲಿ ನಿರಂತರ ಚರ್ಚೆ ನಡೆಯುತ್ತಿವೆ. ಸಾವು, ಇಚ್ಛಾಮರಣ, ಜೈನ ಸಿದ್ಧಾಂತವನ್ನು ಕುರಿತು ಮಂಡಿಸಿದ ಸಂಶೋಧನಾ ಕೃತಿಗಳು ಹೊಸ ಇತಿಹಾಸವನ್ನು ಸೃಷ್ಟಿಸಿವೆ.

ಪ್ರಶಸ್ತಿ-ಗೌರವಗಳು :

ಡಾ. ಷಡಕ್ಷರಿ ಶೆಟ್ಟರ್ ಅವರು ಇತಿಹಾಸ, ಸಂಶೋಧನೆ, ಭಾಷೆ ಕ್ಷೇತ್ರಗಳಲ್ಲಿ ಸಲ್ಲಿಸಿದ ಅನುಪಮ ಸೇವೆಗಾಗಿ ಹಲವಾರು ಪ್ರತಿಷ್ಠಿತ ಪ್ರಶಸ್ತಿಗಳು ಅವರನ್ನು ಅರಸುತ್ತಾ ಬಂದವು. ಅವುಗಳೆಲ್ಲವನ್ನು ಹೇಳುತ್ತಾ ಹೋದರೆ ಒಂದು ದೊಡ್ಡಪಟ್ಟಿಯೇ ಆಗುತ್ತದೆ. ಸಾಂಕೇತಿಕವಾಗಿ ಹೆಸರಿಸುವುದಾದರೆ, ಕನ್ನಡ ರಾಜ್ಯೋತ್ಸವ ಪ್ರಶಸ್ತಿ, ಕೇಂದ್ರ ಸಾಹಿತ್ಯ ಅಕಾಡೆಮಿ ಭಾಷಾ ಸಮ್ಮಾನ, ರತ್ನಪ್ರಶಸ್ತಿ, ೨೦೧೮ರ ಶಾಸ್ತ್ರೀಯ ಕನ್ನಡ ವಾಙ್ಮಯದ ರಾಷ್ಟ್ರ ಪ್ರಶಸ್ತಿ, ಕುಂದಕುಂದ ಪ್ರಶಸ್ತಿ, ಶ್ರವಣ ಬೆಳಗೊಳದಲ್ಲಿ ನಡೆದ ಅಖಿಲ ಭಾರತ ಹಳಗನ್ನಡ ಸಾಹಿತ್ಯ ಸಮ್ಮೇಳನದ ಸರ್ವಾಧ್ಯಕ್ಷತೆ, ಬಳ್ಳಾರಿ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನದ ಸರ್ವಾಧ್ಯಕ್ಷತೆ, ಭಾರತೀಯ ಇತಿಹಾಸ ಅನುಸಂಧಾನ ಪರಿಷತ್ ಹಾಗೂ ಕರ್ನಾಟಕ ಇತಿಹಾಸ ಅನುಸಂಧಾನ ಪರಿಷತ್‌ಗಳ ಸರ್ವಾಧ್ಯಕ್ಷತೆ, ಕೇಂಬ್ರಿಜ್, ಹಾರ್ವರ್ಡ್, ಹೈಡಲ್‌ಬರ್ಗ್-ಅಥೆನ್, ಲೈಡನ್-ಮಾಸ್ಕೋ ವಿಶ್ವವಿದ್ಯಾಲಯಗಳಲ್ಲಿ ಸಂದರ್ಶಕ ಪ್ರಾಧ್ಯಾಪಕ ಗೌರವವೂ ಸೇರಿ ಅನೇಕ ಪ್ರಶಸ್ತಿ, ಗೌರವಗಳಿಗೆ ಭಾಜನರಾಗಿದ್ದರು.

ತಮ್ಮ ಇಡೀ ಬದುಕನ್ನೇ ಇತಿಹಾಸ, ಸಂಶೋಧನೆಗಾಗಿ ಮೀಸಲಾಗಿಟ್ಟಿದ್ದ ಡಾ. ಶೆಟ್ಟರ್ ಅವರು ವಿಧಿವಶರಾಗುವ ಒಂದು ವಾರದವರೆಗೂ ಕ್ರಿಯಾಶೀಲರಾಗಿ ಸಂಶೋಧನೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು. ೩೫ ವರ್ಷಗಳ ಪರಿಶ್ರಮದಿಂದ ಕೈಬರಹದಿಂದ ಸಿದ್ಧವಾಗಿರುವ ೩೫ ಹಳಗನ್ನಡ ಕಾವ್ಯಗಳಿಗೆ ಪದಸೂಚಿ, ವಿಷಯ ಸೂಚಿ ಮುದ್ರಣಕ್ಕೆ ಸಿದ್ಧವಾಗಿದೆ, ಸದ್ಯದಲ್ಲೇ ವಡ್ಡಾರಾಧನೆ, ಸಾಹಸಭೀಮ ವಿಜಯ ಕುರಿತ ಪದಸೂಚಿ-ವಿಷಯ ಸೂಚಿಗಳು ಮುದ್ರಣಕ್ಕೆ ಹೋಗಲಿವೆ ಎಂದು ತಿಳಿದುಬಂದಿದೆ. ಡಾ. ಷಡಕ್ಷರಿ ಶೆಟ್ಟರ್ ಅವರು ಭೌತಿಕವಾಗಿ ನಮ್ಮ ಮುಂದೆ ಇಲ್ಲದೇ ಹೋದರೂ ಅವರು ಬಿಟ್ಟು ಹೋದ ಅಮೂಲ್ಯ ಗ್ರಂಥಗಳಲ್ಲಿ ಸದಾ ಜೀವಂತವಾಗಿರುತ್ತಾರೆ.

ಶ್ರೀ ಸಿದ್ಧಗಂಗಾ ಮಠ ಹಾಗೂ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಬಗ್ಗೆ ಅಪಾರವಾದ ಭಕ್ತಿ, ಗೌರವಗಳನ್ನಿಟ್ಟುಕೊಂಡಿದ್ದ ಡಾ. ಶೆಟ್ಟರ್ ಅವರು ಶ್ರೀಮಠದ ಸಮಾರಂಭಗಳಲ್ಲಿ ಭಾಗವಹಿಸಿ ವಿದ್ವತ್‌ಪೂರ್ಣ ಉಪನ್ಯಾಸವನ್ನು ನೀಡಿದ್ದುದನ್ನು ಇಲ್ಲಿ ಸ್ಮರಿಸಬಯಸುತ್ತೇನೆ.

ಮೃತರ ಆತ್ಮಕ್ಕೆ ಚಿರಶಾಂತಿಯನ್ನು, ಅವರ ಕುಟುಂಬದವರಿಗೆ ಅವರ ಅಗಲಿಕೆಯ ನೋವನ್ನು ಸಹಿಸುವ ಶಕ್ತಿಯನ್ನು ದಯಮಯನಾದ ಪರಶಿವ ಹಾಗೂ ಶ್ರೀ ಸಿದ್ಧಗಂಗಾ ಗುರು ಪರಂಪರೆ ಕರುಣಿಸಲಿ ಎಂದು ಸಿದ್ಧಗಂಗಾ ಪ್ರಾರ್ಥಿಸುತ್ತದೆ.

– ಎಚ್.ಎಸ್. ಸಿದ್ಧಗಂಗಪ್ಪ



### ಆರೋಗ್ಯ – ನಿಮಗಿದು ತಿಳಿದಿರಲಿ

# ಕೊರೊನಾ ವೈರಸ್ – ಅನುಸರಿಸಬೇಕಾದ ಮುನ್ನೆಚ್ಚರಿಕಾ ಕ್ರಮಗಳು

– ನಂಜುಂಡಪ್ಪ ವಿ.

ನೋವೆಲ್ ಕೊರೊನಾ ವೈರಸ್ ಜಾಗತಿಕವಾಗಿ ತೀವ್ರ ಆತಂಕ ಮೂಡಿಸಿರುವ ಆರೋಗ್ಯ ಸಮಸ್ಯೆ. ಇದಕ್ಕೆ "ನೋವೆಲ್ ಕೊರೊನಾ ವೈರಸ್ ೨೦೧೯" ಎಂದು ಕರೆಯುತ್ತಾರೆ. ಕಳೆದ ಡಿಸೆಂಬರ್ ಅಂತ್ಯದಲ್ಲಿ ಈ ಮಾರಕ ವೈರಸ್ ಚೀನಾದಲ್ಲಿ ಪತ್ತೆಯಾಗಿ ೨೦೨೦ರಲ್ಲಿ ಜಗತ್ತಿನೆಲ್ಲೆಡೆ ಆತಂಕಕ್ಕೆ ಕಾರಣವಾಗಿದೆ. ಚೀನಾ ನಂತರ ಅತಿ ಹೆಚ್ಚು ಜನಸಂಖ್ಯೆ ಹೊಂದಿರುವ ದೇಶ ಭಾರತ. ಚೀನಾ ಗಡಿಗೆ ಭಾರತ ಹೊಂದಿಕೊಂಡಿರುವುದರಿಂದ ಆತಂಕ ಹೆಚ್ಚಿದೆ. ಈ ವೈರಸ್ ಯಾವ ರೀತಿ ಭೀತಿ ಸೃಷ್ಟಿಸಿದೆ ಎಂದರೆ ಪ್ರತಿಯೊಂದು ರಾಷ್ಟ್ರಗಳು ವೈರಸ್ ತಡೆಯಲು ತನ್ನದೇ ಆದ ವ್ಯಾಪಕ ಪ್ರತಿಬಂಧಕ ಕ್ರಮಗಳನ್ನು ಕೈಗೊಂಡಿವೆ. ಎಲ್ಲಾ ದೇಶಗಳ ಗಡಿ, ವಿಮಾನ, ರೈಲು ನಿಲ್ದಾಣಗಳಲ್ಲಿ ತೀವ್ರ ತಪಾಸಣೆ ಮಾಡಲಾಗುತ್ತಿದೆ. ಸೋಂಕು ಕಂಡು ಬಂದಿರುವ ಜಿಲ್ಲೆ, ರಾಜ್ಯ, ರಾಷ್ಟ್ರಗಳಲ್ಲಿ ತಪಾಸಣೆ ಹೆಚ್ಚಿಸಲಾಗಿದೆ. ವೈರಸ್ ನಿಯಂತ್ರಣಕ್ಕೆ ಪ್ರತಿಯೊಂದು ಜಿಲ್ಲೆ, ಗಡಿ ಭಾಗಕ್ಕೆ ಒಂದೊಂದು, ರಾಜ್ಯ ಮತ್ತು ರಾಷ್ಟ್ರಮಟ್ಟದಲ್ಲಿ ಒಂದೊಂದು ರೀತಿಯ ಕಾರ್ಯತಂತ್ರಗಳನ್ನು ಅನುಸರಿಸಲಾಗುತ್ತಿದೆ.

ನೋವೆಲ್ ಕೊರೊನಾ ವೈರಸ್‌ಗೂ ಮುನ್ನ ಕಳೆದ ೨೦೦೩ ರಲ್ಲಿ ಸಾರ್ಸ್ ಇದೇ ರೀತಿ ಭೀತಿ ಸೃಷ್ಟಿಸಿತ್ತು. ಬಳಿಕ ಏವಿನ್, ಮೆರ್ಸ್, ನಿಫಾ, ಎಚ್೧ಎನ್೧ ವೈರಸ್ ಸಮಸ್ಯೆ ಬಾಧಿಸಿತು. ನಂತರ ಎಬೋಲಾದಂತಹ ಸಮಸ್ಯೆಗಳು ಸಹ ಕಂಡುಬಂತು. ವೈದ್ಯಕೀಯ ಅಧ್ಯಯನದ ಪ್ರಕಾರ ಜಗತ್ತಿನಲ್ಲಿ ೧೧೮ ರೀತಿಯ ವೈರಸ್‌ಗಳಿವೆ. ಆದರೆ ಈಗ ಕಂಡು ಬಂದಿರುವ ಕೊರೊನಾ ವೈರಸ್ ಅತ್ಯಂತ ದೊಡ್ಡ ಮತ್ತು ಮಾರಣಾಂತಿಕ ಸಮಸ್ಯೆ. ಅದಕ್ಕಾಗಿಯೇ ಜಾಗತಿಕ ಸ್ವಾಸ್ಥ್ಯಕ್ಕಾಗಿ ಟೊಂಕಕಟ್ಟಿ ನಿಂತಿರುವ ವಿಶ್ವ ಆರೋಗ್ಯ ಸಂಸ್ಥೆ ನೋವೆಲ್ ಕೊರೊನಾ ವೈರಸ್ ತಡೆಗಾಗಿ ಸಮರವನ್ನೇ ಸಾರಿದೆ. ಜಾಗತಿಕವಾಗಿ ತುರ್ತುಪರಿಸ್ಥಿತಿ ಘೋಷಿಸಿ ಮುನ್ನೆಚ್ಚರಿಕೆ ಕ್ರಮಗಳನ್ನು ಕೈಗೊಂಡಿದೆ. ವೈರಸ್‌ಗೆ ಚಿಕಿತ್ಸೆ, ಔಷಧಗಳ ಸಂಶೋಧನೆಗೆ ಒತ್ತು ನೀಡಿದೆ. ಮಾಹಿತಿ ನೀಡುವ ಜತೆಗೆ ಜಗತ್ತಿನ ಎಲ್ಲಾ ದೇಶಗಳಿಗೆ ಆಗಿಂದಾಗ್ಗೆ ಸೂಕ್ತ ಮಾರ್ಗಸೂಚಿ ಬಿಡುಗಡೆ ಮಾಡುತ್ತಿದೆ.



ಚೀನಾ ಸೇರಿದಂತೆ ವಿಶ್ವದ ಹಲವು ರಾಷ್ಟ್ರಗಳಲ್ಲಿ ಕೊರೊನಾ ವೈರಸ್ ಪಸರಿಸಿದ್ದು, ಸೋಂಕಿತರ ಬಗ್ಗೆ ತಾರತಮ್ಯ ಸಲ್ಲದು ಎಂದು ವಿಶ್ವ ಆರೋಗ್ಯ ಸಂಸ್ಥೆ ಮನವಿ ಮಾಡಿದೆ. ಜಾಗತಿಕವಾಗಿ ಭೀತಿ ಮೂಡಿಸಿರುವ ಕೊರೊನಾ ವೈರಸ್‌ಗೆ ವಿಶ್ವ ಆರೋಗ್ಯ ಸಂಸ್ಥೆಯು "ಕೋವಿಡ್-೨೦೧೯" ಎಂದು ಹೊಸದಾಗಿ ನಾಮಕರಣ ಮಾಡಿದೆ. ಕೊರೊನಾ ವೈರಸ್ ಮತ್ತು ಡಿಸೀಸ್ ಎಂಬ ಪದಗಳ ಮೊದಲ ಅಕ್ಷರಗಳನ್ನು ತೆಗೆದುಕೊಂಡು "ಕೋವಿಡ್-೨೦೧೯" ಎಂದು ನಾಮಕರಣ ಮಾಡಲಾಗಿದೆ. ವಿಶ್ವ ಆರೋಗ್ಯ ಸಂಸ್ಥೆಯ ಮಾಹಿತಿ ಪ್ರಕಾರ ಈ ವೈರಾಣು ೨೦೧೯ರ ಡಿಸೆಂಬರ್ ೩೧ ರಂದು ಮೊದಲ ಬಾರಿಗೆ ಪತ್ತೆ ಹಚ್ಚಲಾಗಿತ್ತು.

ನೋವೆಲ್ ಕೊರೊನಾ ವೈರಸ್ ನಿಯಂತ್ರಣಕ್ಕೆ ರಾಜ್ಯ ಸರ್ಕಾರ ಕೂಡ ವ್ಯಾಪಕ ಪ್ರತಿಬಂಧಕ ಕ್ರಮಗಳನ್ನು ಕೈಗೊಂಡಿದೆ. ಕೇಂದ್ರದ ಜತೆ ನಿರಂತರ ಸಂಪರ್ಕದಲ್ಲಿದ್ದು, ಅಲ್ಲಿಂದ ಬರುವ ಸೂಚನೆಗಳು ಹಾಗೂ ವಿಶ್ವ ಆರೋಗ್ಯ ಸೂಚನೆಗಳು ಹಾಗೂ ವಿಶ್ವ ಆರೋಗ್ಯ ಸಂಸ್ಥೆಯ ಮಾರ್ಗಸೂಚಿಗಳನ್ನು ಪಾಲನೆ ಮಾಡುವ ಕೆಲಸದಲ್ಲಿ ತೊಡಗಿದೆ. ಜತೆಗೆ ಜಿಲ್ಲಾ ಮಟ್ಟದಲ್ಲಿ ಕೊರೊನಾ ವೈರಸ್ ನಿಯಂತ್ರಣಕ್ಕಾಗಿ ಎಲ್.ಇ.ಡಿ. ವಾಹನಗಳ ಮೂಲಕ ಆಶಾ ಮತ್ತು ಆರೋಗ್ಯ ಕಾರ್ಯಕರ್ತರು ನಗರ ಮತ್ತು ಗ್ರಾಮಾಂತರ ಪ್ರದೇಶದಲ್ಲಿ ಜನಜಾಗೃತಿ ಮೂಡಿಸುತ್ತಿದ್ದಾರೆ. ಸೋಂಕಿತರು ಕಂಡು ಬಂದರೆ ಚಿಕಿತ್ಸೆ ನೀಡಲು ಪ್ರತಿಯೊಂದು ಜಿಲ್ಲೆಯಲ್ಲಿ ಪ್ರತ್ಯೇಕ ವಾರ್ಡ್‌ಗಳನ್ನು ತೆರೆಯಲಾಗುತ್ತಿದೆ. ವಿಶೇಷ ಎಂದರೆ ಇಂತಹ ಸಮಸ್ಯೆ ನಿವಾರಣೆಗೆ ಅತ್ಯಂತ ನೈಪುಣ್ಯತೆ ಹೊಂದಿರುವ ಬೆಂಗಳೂರಿನ ರಾಜೀವ್ ಗಾಂಧಿ ಎದೆರೋಗಗಳ ಸಂಸ್ಥೆ ರಾಜ್ಯ ಸರ್ಕಾರದ ಜತೆ ಸೇರಿ ವೈರಸ್ ತಡೆಗೆ







## ವದಂತಿಗಳಿಗೆ ಕಿವಿಗೊಡಬೇಡಿ

ಕೊರೊನಾ ವೈರಸ್‌ಗೆ ಹೋಮಿಯೋಪತಿ ಔಷಧಿ ಲಭ್ಯವಿದೆ ಎಂದು ವದಂತಿಗಳು ಹರಡುತ್ತಿವೆ. ಆದರೆ ಇದು ಸತ್ಯಕ್ಕೆ ದೂರವಾದುದು ಎಂದು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಆಯುಕ್ತರಾದ ಪಂಕಜ್ ಕುಮಾರ್ ಪಾಂಡೆ ಅವರು ಸ್ಪಷ್ಟಪಡಿಸಿದ್ದಾರೆ. ಈ ಸೋಂಕಿಗೆ ಇದುವರೆಗೂ ಔಷಧಿ ಹಾಗೂ ಲಸಿಕೆಗಳು ಲಭ್ಯವಿಲ್ಲ. ಸಾರ್ವಜನಿಕವಾಗಿ ಆರ್ಸೆನಿಕಂ ಆಲ್ಬಂ ೩೦ ಸಿಎಚ್ ಎಂಬ ಔಷಧಿಯಿದೆ ಎಂಬ ತಪ್ಪು ಮಾಹಿತಿಯನ್ನು ಹರಡಲಾಗುತ್ತಿದೆ. ಈ ರೀತಿಯ ಔಷಧಿಗಳನ್ನು ಸೇವಿಸಿ ತೊಂದರೆ ಅನುಭವಿಸಿದಲ್ಲಿ ಅದಕ್ಕೆ ಇಲಾಖೆ ಅಥವಾ ಸರ್ಕಾರ ಹೊಣೆಯಾಗುವುದಿಲ್ಲ ಎಂದು ಅವರು ತಿಳಿಸಿದ್ದಾರೆ. ಸಾರ್ವಜನಿಕರು ಈ ಕುರಿತು ಯಾವುದೇ ವದಂತಿಗಳನ್ನು ನಂಬಬಾರದು. ಏನೇ ಸಂಶಯಗಳಿದ್ದರೂ ಸ್ಥಳೀಯ ಸರ್ಕಾರಿ ವೈದ್ಯರನ್ನು ಸಂಪರ್ಕಿಸುವಂತೆ ಅವರು ಸಾರ್ವಜನಿಕರಲ್ಲಿ ಮನವಿ ಮಾಡಿದ್ದಾರೆ.

ನಿರಂತರವಾಗಿ ಕಾರ್ಯನಿರ್ವಹಿಸುತ್ತಿದೆ. ಈ ಹಿಂದೆ ಕಂಡು ಬಂದ ಶ್ವಾಸಕೋಶ ರೋಗಗಳ ಸಮಸ್ಯೆ ಸಂದರ್ಭದಲ್ಲೂ ರಾಜ್ಯದ ಜನರಲ್ಲಿ ವಿಶ್ವಾಸ ಮೂಡಿಸಿತ್ತು. ಇದೀಗ ಕೊರೊನಾ ವೈರಸ್ ಸೋಂಕಿತರು ಕಂಡುಬಂದಲ್ಲಿ ತಕ್ಷಣವೇ ಚಿಕಿತ್ಸೆ ನೀಡಲು ಇಲ್ಲಿನ ತಜ್ಞರು ಸಜ್ಜಾಗಿದ್ದಾರೆ. ಸಾಕಷ್ಟು ಮಂದಿ ಈಗಾಗಲೇ ಸ್ವಯಂ ಪ್ರೇರಣೆಯಿಂದ ಇಲ್ಲಿ ತಪಾಸಣೆಗೊಳಪಟ್ಟಿದ್ದು, ದಿನನಿತ್ಯ ಶಂಕಿತರ ದಂಡು ಇಲ್ಲಿಗೆ ಭೇಟಿ ನೀಡುತ್ತಿದೆ. ನೋವೆಲ್ ಕೊರೊನಾ ವೈರಸ್ ಪ್ರಾಣಿಗಳಲ್ಲಿ ಮತ್ತು ಮನುಷ್ಯರಲ್ಲಿ ಕಂಡುಬರುತ್ತದೆ. ಬಹುಮುಖ್ಯವಾಗಿ ಶಾಸ್ವಕೋಶ ಹಾಗೂ ಉಸಿರಾಟಕ್ಕೆ ಇದು ತೊಂದರೆ ಉಂಟು ಮಾಡುತ್ತದೆ.

**ರೋಗದ ಲಕ್ಷಣಗಳು :** ಜ್ವರ, ತಲೆನೋವು, ನೆಗಡಿ, ಕೆಮ್ಮು, ಉಸಿರಾಟದ ತೊಂದರೆ, ನ್ಯುಮೋನಿಯಾ, ಬೇಧಿ ಕಂಡುಬಂದಲ್ಲಿ ಮೊದಲು ತಜ್ಞವೈದ್ಯರ ಬಳಿ ತಪಾಸಣೆಗೆ ಒಳಪಡಬೇಕು.

**ಹರಡುವ ವಿಧಾನ :** ಸೋಂಕಿತ ವ್ಯಕ್ತಿ ಸೀನಿದಾಗ, ಸೋಂಕಿತ ವ್ಯಕ್ತಿಯ ಜತೆ ನಿಕಟ ಸಂಪರ್ಕದಲ್ಲಿರುವಾಗ, ಸೋಂಕಿತ ವ್ಯಕ್ತಿಯ ಜತೆ ಹಸ್ತಲಾಘವ ಮಾಡಿದಾಗ, ಮುಟ್ಟಿದಾಗ, ಸೋಂಕಿತ ವ್ಯಕ್ತಿಯು ಬಳಸಿದ ವಸ್ತುಗಳನ್ನು ಯಾವುದೇ ರಕ್ಷಣೆ ಇಲ್ಲದೇ ಬಳಸಿದಾಗ, ಸ್ವಚ್ಛಗೊಳಿಸಿದ, ಸುರಕ್ಷಿತವಲ್ಲದ ಕೈಗಳಿಂದ ಕಣ್ಣು, ಮೂಗು, ಬಾಯಿಯನ್ನು ಮುಟ್ಟುವುದರಿಂದ.

**ಮುನ್ನೆಚ್ಚರಿಕೆ ಕ್ರಮಗಳು :** ಸೋಂಕಿತರ ಸಂಪರ್ಕದಿಂದ ದೂರ ಇರುವುದು, ಶಂಕಿತ ರೋಗಿ ಮನೆಯಲ್ಲಿದ್ದರೆ ಪ್ರತ್ಯೇಕ ಕೋಣೆಯಲ್ಲಿರಿಸಬೇಕು. ವೈಯುಕ್ತಿಕ ಸ್ವಚ್ಛತೆ ಕಾಪಾಡಿಕೊಳ್ಳುವುದರ ಜೊತೆಗೆ ಆಗಾಗ್ಗೆ ಸಾಬೂನಿನಿಂದ ಕೈ ತೊಳೆದುಕೊಳ್ಳಬೇಕು.

ಕೆಮ್ಮುವಾಗ, ಸೀನುವಾಗ ಮಾಸ್ಕ್ ಮತ್ತು ಕರವಸ್ತ್ರ ಉಪಯೋಗಿಸಬೇಕು. ವಿಶೇಷ ಎಂದರೆ ವಿಶ್ವ ಆರೋಗ್ಯ ಸಂಸ್ಥೆ ಇತ್ತೀಚೆಗೆ ಬಿಡುಗಡೆ ಮಾಡಿರುವ ಮಾರ್ಗಸೂಚಿ ಪ್ರಕಾರ ಕರವಸ್ತ್ರ, ನ್ಯಾಪ್ಕಿನ್‌ಗಿಂತ, ಕೆಮ್ಮು, ಸೀನು ಬಂದಾಗ ಮೂಗು ಮತ್ತು ಬಾಯಿಯ ಮುಂದೆ ಎರಡೂ ಕೈಗಳನ್ನು ಅಡ್ಡತಂದು ಸೀನಬೇಕು. ಇದರಿಂದ ಕರವಸ್ತ್ರ, ಕರ್ಚೀಫ್ ಬಳಸುವುದು ತಪ್ಪುತ್ತದೆ ಎಂದು ಹೇಳಿದೆ. ಬಾಯಿಗೆ ಅಡ್ಡಲಾಗಿ ಬಳಸಿದ ಟಿಶ್ಯೂವನ್ನು ಕೂಡಲೇ ಕಸದ ಬುಟ್ಟಿಗೆ ಹಾಕಬೇಕು. ಕಣ್ಣು, ಮೂಗು, ಬಾಯಿಯನ್ನು ಆಗಾಗ ಮುಟ್ಟಿಕೊಳ್ಳಬಾರದು. ಕೈಗಳನ್ನು ಶುಚಿಯಾಗಿ ಇಟ್ಟುಕೊಳ್ಳಬೇಕು. ಜತೆಗೆ ಸಾರ್ವಜನಿಕ ಸ್ಥಳಗಳಲ್ಲಿ ಉಗುಳಬಾರದು. ಉಸಿರಾಟದ ತೊಂದರೆಯಾದಲ್ಲಿ ತಕ್ಷಣ ವೈದ್ಯರ ಸಲಹೆ ಪಡೆಯಬೇಕು.

ಶ್ವಾಸಕೋಶ ಸಮಸ್ಯೆ ಅಂದರೆ ಇದಕ್ಕೆ ಡ್ರಾಪ್ಲೆಟ್ ಇನ್ಫೆಕ್ಷನ್ ಎನ್ನುತ್ತಾರೆ. ಜೀವ ಇರುವ ಅಣುವಿನ ಜತೆ ಇದು ಇರುತ್ತದೆ. ಬಾಗಿಲು, ಹ್ಯಾಂಡಲ್, ಬಸ್, ರೈಲು, ವಿಮಾನ ನಿಲ್ದಾಣಗಳ ಹ್ಯಾಂಡಲ್‌ಗಳ ಮೇಲೆ ಕೆಮ್ಮು, ಸೀನಿನ ಫ್ಲೂಯಿಡ್‌ಗಳು ಬಿದ್ದಲ್ಲಿ ಒಣಗುವ ತನಕ ವೈರಸ್‌ಗೆ ಜೀವ ಇರುತ್ತದೆ. ಬಳಿಕ ವೈರಾಣು ಸಾಯುತ್ತದೆ. ಇದು ಗಾಳಿಯಲ್ಲಿ ಹರಡುವುದರಿಂದ ಕೆಮ್ಮು, ಸೀನಿದಾಗ ಎಚ್ಚರಿಕೆ ಅಗತ್ಯ. ಒಟ್ಟಿನಲ್ಲಿ ಶುಚಿತ್ವಕ್ಕೆ ನೀಡಬೇಕು.

ಸೋಂಕು ಹೊಂದಿರುವ ಶಂಕಿತರ ಮೇಲೆ ೧೪ ದಿನಗಳ ಕಾಲ ನಿಗಾ ಇಡುವ ಅಗತ್ಯವಿದೆ. ಈ ಅವಧಿಯಲ್ಲಿ ವೈರಾಣು ತೀವ್ರಗೊಳ್ಳುವ ಸಾಧ್ಯತೆ ಇರುತ್ತದೆ. ಶಂಕಿತರು ಜನನಿಬಿಡ ಪ್ರದೇಶಗಳಿಗೆ ಹೋಗಬಾರದು. ಮದುವೆ, ಸಿನಿಮಾ, ಜಾತ್ರೆಗಳಿಂದ ದೂರ ಇರಬೇಕು. ಸ್ವಲ್ಪ ಹುಷಾರು ತಪ್ಪಿದರೂ ಸಾಕಷ್ಟು ನೀರು ಕುಡಿದು ದೇಹದಲ್ಲಿ ನೀರಿನಂಶ ಕಡಿಮೆಯಾಗದಂತೆ ನೋಡಿಕೊಳ್ಳಬೇಕು. ಜ್ವರ, ಶೀತ, ಇದ್ದಾಗ ಪ್ರಯಾಣ ಮಾಡದಿರುವುದು ಒಳ್ಳೆಯದು.

ಮಾನಸಿಕ ಒತ್ತಡಕ್ಕೆ ಒಳಗಾಗಬಾರದು. ಧೈರ್ಯದಿಂದಿರಬೇಕು. ಚೆನ್ನಾಗಿ ನಿದ್ರೆ ಮಾಡುವ ಜತೆಗೆ ಶ್ವಾಸಕೋಶದ ಆರೋಗ್ಯಕ್ಕಾಗಿ ಸೂಕ್ತ ವ್ಯಾಯಾಮ ಮಾಡಿಕೊಳ್ಳುವುದು ಅಗತ್ಯ. ಕೊರೊನಾ ವೈರಸ್‌ಗೆ ಇದುವರೆಗೆ ಔಷಧಿ ಕಂಡು ಹಿಡಿದಿಲ್ಲ. ಆದರೆ ಕೆಲವು







ಮುನ್ನೆಚ್ಚರಿಕೆ ಕ್ರಮ ಅನುಸರಿಸಿದ್ರೆ ಇದನ್ನು ತಡೆಗಟ್ಟಬಹುದು. ಸ್ವಯಂ ಪ್ರೇರಿತವಾಗಿ ಚಿಕಿತ್ಸೆ ಪಡೆಯುವುದು ಅಪಾಯಕಾರಿ. ವೈದ್ಯರ ಸಲಹೆ ಪಡೆದ ನಂತರವೇ ಗುಳಿಗೆ, ಔಷಧಿ ಸೇವಿಸಬೇಕು.

**ಮಾಸ್ಕ್ ಧರಿಸಲೇಬೇಕ?** ಕೊರೊನಾ ವೈರಸ್ ಭೀತಿ ಆವರಿಸಿದ ನಂತರ ಮಾಸ್ಕ್‌ಗಳ ಕೊರತೆ ಕಂಡುಬಂದಿದೆ. ಸರ್ಜಿಕಲ್ ಮಾಸ್ಕ್, ಎನ್೯೫ ಮಾಸ್ಕ್ ಎಂಬ ಕೆಲ ವಿಧಗಳಿವೆ. ಆದರೆ ಮಾಸ್ಕ್ ಧರಿಸಲಬೇಕು ಎಂದೇನಿಲ್ಲ. ಸಮಾಧಾನಕ್ಕಾಗಿ ಮಾಸ್ಕ್ ಧರಿಸಲಾಗುತ್ತಿದೆ. ಫೇಸ್ ಮಾಸ್ಕ್ ಧರಿಸಿದರೆ ಮೂಗು ಮತ್ತು ಬಾಯಿಯನ್ನು ಕವರ್ ಮಾಡಿ. ಒಮ್ಮೆ ಮಾಸ್ಕ್ ಧರಿಸಿದ ಬಳಿಕ ಆಗಾಗ ಮಾಸ್ಕ್ ಅನ್ನು ಮುಟ್ಟುತ್ತಿರಬೇಡಿ.

**ಯಾರನ್ನು ಹೆಚ್ಚು ಬಾಧಿಸುತ್ತದೆ :** ರೋಗ ನಿರೋಧಕ ಶಕ್ತಿ ಕಡಿಮೆ ಇರುವವರು, ಮಧುಮೇಹ, ಎಚ್.ಐ.ವಿ., ಮೂತ್ರಪಿಂಡ ಸಮಸ್ಯೆ, ಶ್ವಾಸಕೋಶ ತೊಂದರೆ, ಅತಿ ಹೆಚ್ಚು ಔಷಧಿಗಳನ್ನು ಸೇವಿಸುವವರಿಗೆ ಕೊರೊನಾ ವೈರಸ್ ವ್ಯಾಪಿಸುತ್ತದೆ. ಎಚ್೧, ಎನ್೧ ಗೂ ಕೊರೊನಾಗೂ ಒಂದೇ ರೀತಿಯ ಚಿಹ್ನೆ ಇರುತ್ತದೆ. ಭಿನ್ನತೆ ಏನಿಲ್ಲ, ಕೊರೊನಾ ವನ್ಯಜೀವಿಗಳಲ್ಲಿರುವ ವೈರಸ್ ಆಗಿದೆ. ಹಾಗಾಗಿ ಪ್ರಾಣಿಗಳ ಜತೆ ಸಂಪರ್ಕ ಹೊಂದುವುದು ಸೂಕ್ತವಲ್ಲ.

**ಸಾರ್ವಜನಿಕರಲ್ಲಿ ತಪ್ಪುಕಲ್ಪನೆ :** ಮಾಂಸಾಹಾರ ಸೇವಿಸಬಾರದು ಎನ್ನುವುದು ತಪ್ಪುಕಲ್ಪನೆ. ಕೋಳಿ, ಮಾಂಸ, ಮೀನು, ಮೊಟ್ಟೆಯನ್ನು ಚೆನ್ನಾಗಿ ಬೇಯಿಸಿ ತಿಂದರೆ ಸಮಸ್ಯೆ ಇಲ್ಲ. ಜತೆಗೆ ಹೆಚ್ಚಿನ ಪೌಷ್ಠಿಕಾಂಶ ಸೇವಿಸಬೇಕು. ಹೆಚ್ಚುಚ್ಚು ದ್ರವ ಆಹಾರ ಸೇವೆ ಸೂಕ್ತ. ಗಂಟಲು ಒಣಗಲು ಬಿಡಬಾರದು. ಆಗಾಗ ನೀರು ಕುಡಿಬೇಕು.

ಚೀನಾದಿಂದ ಬರುವ ಲಕೋಟೆ, ಪಾರ್ಸೆಲ್‌ಗಳನ್ನು ಸ್ವೀಕರಿಸಬಾರದು. ಅದರಲ್ಲಿ ವೈರಸ್ ಇರುತ್ತದೆ ಎನ್ನುವುದು ತಪ್ಪು ಕಲ್ಪನೆ. ಇಂತಹ ಪಾರ್ಸೆಲ್ ವಸ್ತುಗಳಲ್ಲಿ ವೈರಸ್ ಬದುಕುವುದಿಲ್ಲ. ಜೀವ ಇರುವವರ ಜತೆ ಮಾತ್ರ ವೈರಸ್ ಬದುಕುತ್ತವೆ.

ಗಂಡು ಮಕ್ಕಳಿಗಿಂತ ಹೆಣ್ಣು ಮಕ್ಕಳಿಗೆ ಹೆಚು ಬಾಧಿಸುತ್ತದೆ ಎನ್ನುವ ತಪ್ಪು ಕಲ್ಪನೆ. ಇಬ್ಬರಿಗೂ ಇದು ಸಮಾನವಾಗಿ ಬಾಧಿಸುತ್ತದೆ. ಆದರೆ ಗರ್ಭಿಣಿ ಮಹಿಳೆಯರು ಹೆಚ್ಚಿನ ಮುಂಜಾಗ್ರತೆ ವಹಿಸಬೇಕು.

ಮೌತ್ ವಾಷ್‌ಗಳಿಂದ ಕೊರೊನಾ ವೈರಸ್ ನಿವಾರಿಸಬಹುದು ಎನ್ನುವುದು ತಪ್ಪು. ಕೊರೊನಾ ವೈರಸ್ ಬಂದವರೆಲ್ಲಾ ಸಾಯುತ್ತಾರೆ ಎನ್ನುವುದ ಸರಿಯಲ್ಲ. ಈ ಸಮಸ್ಯೆ ಕಂಡುಬಂದರೆ ಸೂಕ್ತ ಚಿಕಿತ್ಸಾ ಕ್ರಮಗಳ ಮೂಲಕ

## ಹಸ್ತಲಾಘವ ಬೇಡ – ನಮಸ್ತೆ ಹೇಳಿ

ರಾಜೀವ್ ಗಾಂಧಿ ಎದೆರೋಗಗಳ ಸಂಸ್ಥೆಯಲ್ಲಿ ಕೊರೊನಾ ವೈರಸ್ ನಿವಾರಣೆಗೆ ೧೪ ಹಾಸಿಗೆಗಳ ವಾರ್ಡ್ ಸಿದ್ಧಪಡಿಸಲಾಗಿದೆ. ಐದು ಹಾಸಿಗೆಗಳ ಐಸಿಯು ಸಹ ಸಜ್ಜುಗೊಳಿಸಲಾಗಿದೆ. ಈ ಎರಡು ಕೇಂದ್ರಗಳು ನಿರಂತರವಾಗಿ ಕಾರ್ಯನಿರ್ವಹಿಸುತ್ತಿದ್ದು, ಮಾದರಿಗಳ ಪರೀಕ್ಷಾ ವರದಿ ೨೪ ಗಂಟೆಗಳಲ್ಲಿ ದೊರೆಯುತ್ತಿದೆ. ಇದಕ್ಕಾಗಿ ಸಂಸ್ಥೆಯಲ್ಲಿ ಪ್ರತ್ಯೇಕ ಪ್ರಯೋಗಾಲಯ ತೆರೆಯಲಾಗಿದೆ. ಬೆಂಗಳೂರಿನ ಎದೆರೋಗಗಳ ಆರೋಗ್ಯ ಸಂಸ್ಥೆ ರಾಜ್ಯ ಸರ್ಕಾರದ ನೋಡೆಲ್ ಕೇಂದ್ರ ಆಗಿದ್ದು. ಇಲ್ಲಿ ಪ್ರತ್ಯೇಕ ಮಾಹಿತಿ ಕೇಂದ್ರವಿದೆ. ವಿಶ್ವ ಆರೋಗ್ಯ ಸಂಸ್ಥೆ ಮಾರ್ಗಸೂಚಿಯನ್ನು ನಾವು ಪಾಲಿಸಲಾಗುತ್ತಿದೆ. ನಮ್ಮ ಸಂಸ್ಥೆಗೆ ಜನ ಭಯಭೀತಿಯಿಂದ ಬರುತ್ತಿದ್ದಾರೆ. ನನ್ನ ಪಕ್ಕ ಕುಳಿತಿದ್ದವರು ಚೀನಾದವರಂತೆ ಕಾಣುತ್ತಿದ್ದು, ಅವರಿಂದ ನನಗೆ ಈ ವೈರಸ್ ಬಂದಿರಬಹುದು ಎನ್ನುವ ಆತಂಕ ತೋಡಿಕೊಂಡಿರುವ ಹಲವು ಪ್ರಕರಣಗಳು ಕಂಡುಬಂದಿವೆ. ರೋಗ ಪತ್ತೆ ಮಾಡುವುದು ಮಹತ್ವದ ಘಟ್ಟ. ಪತ್ತೆಯಾದ ನಂತರ ರೋಗಿಗಳಲ್ಲಿ ಯಾವ ಯಾವ ಲಕ್ಷಣಗಳು ಇವೆ ಎಂಬುದನ್ನು ನೋಡಿ ಚಿಕಿತ್ಸೆ ನೀಡಲಾಗುತ್ತಿದೆ.

ಆದರೆ ಜನತೆ ಸಾಮಾಜಿಕ ಜಾಲ ತಾಣಗಳಲ್ಲಿರುವ ತಪ್ಪು ಸಂದೇಶಗಳಿಗೆ ಕಿವಿಗೊಡಬಾರದು. ತಪ್ಪು ಕಲ್ಪನೆಗಳನ್ನು ಇಟ್ಟುಕೊಳ್ಳಬಾರದು. ತಪ್ಪು ಸಂದೇಶಗಳನ್ನು ಮತ್ತೊಬ್ಬರಿಗೆ ರವಾನಿಸಿ ಆತಂಕ ಸೃಷ್ಟಿಸಬೇಡಿ. ವಿಶ್ವಾಸಾರ್ಹ, ನಂಬಿಕೆಗೆ ಅರ್ಹವಾದ ಸುದ್ದಿಗಳನ್ನು ಮಾತ್ರ ಹಂಚಿಕೊಳ್ಳಿ. ಯಾರಿಗೂ ಹಸ್ತಲಾಘವ ಮಾಡಬೇಡಿ. ಭಾರತೀಯ ಸಂಪ್ರದಾಯದಂತೆ ನಮಸ್ತೆ ಎಂದು ಹೇಳುವುದು ಸುರಕ್ಷಿತ.

ಗುಣಮುಖರಾಗಬಹುದು. ವೈದ್ಯಕೀಯ ಅಧ್ಯಯನ ಪ್ರಕಾರ ಈ ರೋಗ ಬಂದರೆ ಸಾವಿನ ಪ್ರಮಾಣ ಶೇ. ೩ ರಷ್ಟು ಮಾತ್ರ ಪ್ರತಿದಿನ ಚೀನಾದಲ್ಲಿ ರೋಗದಿಂದ ಗುಣಮುಖರಾಗಿ ಆಸ್ಪತ್ರೆಯಿಂದ ಬಿಡುಗಡೆಯಾಗುತ್ತಿರುವುದೇ ಇದಕ್ಕೆ ಸಾಕ್ಷಿ. ೨೦೦೩ ರಲ್ಲಿ ಸಾರ್ಸ್ ಸಮಸ್ಯೆ ಕಂಡು ಬಂದಾಗ ಸಾವಿನ ಪ್ರಮಾಣ ಶೇ. ೧೦ ರಷ್ಟಿತ್ತು. ಆಗ ೭೦೦ ರಿಂದ ೮೦೦ ಮಂದಿ ಮೃತಪಟ್ಟಿದ್ದರು. ಈಗ ವೈದ್ಯಕೀಯ ಕ್ಷೇತ್ರ ಬೆಳೆದಿದೆ. ನಿಯಂತ್ರಣ ಕ್ರಮಗಳು ಪರಿಣಾಮಕಾರಿಯಾಗಿವೆ. ಆದರೆ ವೈರಸ್ ಬಗ್ಗೆ ಆತಂಕ ಇರುವುದು ಮಾತ್ರ ಸುಳ್ಳಲ್ಲ. ಹಾಗೆಯೇ ಪರಿಹಾರವೂ ಇದೆ ಎನ್ನುವ ಸಕಾರತ್ಮಕ ಭಾವನೆ ಬೆಳೆಸಿಕೊಳ್ಳುವುದು ಅಗತ್ಯ.

(ಕೃಪೆ: ಜನಪದ)

## ಕಲಬುರಗಿ ಪಿಡಿಎ ಇಂಜಿನಿಯರಿಂಗ್ ಕಾಲೇಜ್ ಆವರಣದಲ್ಲಿ ನಡೆದಾಡುವ ದೇವರು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮೀಜಿ ಪುತ್ಥಳಿ ಅನಾವರಣ ಹಾಗೂ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿ ಸ್ಕೂಲ್ ಆಫ್ ಆರ್ಕಿಟೆಕ್ಟ್ ಲೋಕಾರ್ಪಣೆ




ಕಲಬುರಗಿಯಲ್ಲಿ ಹೈದರಾಬಾದ್ ಕರ್ನಾಟಕ ಶಿಕ್ಷಣ ಸಂಸ್ಥೆಯ ಪೂಜ್ಯ ಶ್ರೀ ಡಾ. ಶಿವಕುಮಾರ ಸ್ವಾಮೀಜಿ ಸ್ಕೂಲ್ ಆಫ್ ಆರ್ಕಿಟೆಕ್ಟ್ ಅನ್ನು ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ ಪರಮಪೂಜ್ಯ ಶ್ರೀ ಸಿದ್ಧಲಿಂಗ ಸ್ವಾಮೀಜಿಯವರು ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಶ್ರೀಯುತರಾದ ಭೀಮಾಶಂಕರ ಬಿಲಗುಂದಿ, ಜಿ.ಜಿ.ಪಾಟೀಲ್, ಶಿವಾನಂದ ದೇವರಮನಿ, ನಾಗೇಂದ್ರ ಮಂತಾಳೆ, ಎಸ್.ಬಿ.ಕಾಮರಡ್ಡಿ, ಅರುಣಕುಮಾರ ಪಾಟೀಲ್, ಉದಯಕುಮಾರ ಚಿಂಚೋಳಿ, ನಿತೀನ್ ಜವಳಿ, ಹಡಗಲಿಮಠ ಮೊದಲಾದ ಗಣ್ಯರು ಉಪಸ್ಥಿತರಿದ್ದರು.

ಕಲಬುರಗಿಯಲ್ಲಿ ಮಾರ್ಚ್ ೭ ರಂದು ನಡೆದ ಸಮಾರಂಭದಲ್ಲಿ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿ ಸ್ಕೂಲ್ ಆಫ್ ಆರ್ಕಿಟೆಕ್ಟ್‌ನ್ನು ಲೋಕಾರ್ಪಣೆ ಮಾಡಿ ಆಶೀರ್ವಚನ ನೀಡಿದರು. ಅವರು ತಮ್ಮ ಆಶೀರ್ವಚನದಲ್ಲಿ "ಜೀವನಮಾನದುದ್ದಕ್ಕೂ ಬಸವಾದಿ ಶರಣರ ತತ್ತ್ವಗಳ ಆಶಯದಂತೆ ನಡೆದು, ಮಕ್ಕಳಲ್ಲೇ ದೇವರನ್ನು ಕಂಡಿದ್ದ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮೀಜಿಯವರು ಇಂದು ನಮ್ಮೊಂದಿಗೆ ಇಲ್ಲದಿದ್ದರೂ ಸ್ಫೂರ್ತಿಯ ಚಿಲುಮೆಯಾಗಿ ಆಶೀರ್ವಾದ ಮಾಡುತ್ತಲೇ ಇದ್ದಾರೆ ಎಂದು ಹೇಳಿದರು.

ಪೂಜ್ಯ ಶ್ರೀಗಳವರು ಇದೇ ಸಂದರ್ಭದಲ್ಲಿ ಪೂಜ್ಯ ದೊಡ್ಡಪ್ಪ ಅಪ್ಪ ತಾಂತ್ರಿಕ ಮಹಾವಿದ್ಯಾಲಯ ಆವರಣದಲ್ಲಿ ನಡೆದಾಡುವ ದೇವರು, ಕರ್ನಾಟಕ ರತ್ನ ಲಿಂಗೈಕ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿಯವರ ಪುತ್ಥಳಿಯನ್ನು ಅನಾವರಣಗೊಳಿಸಿದರು.

ಸ್ವಾರ್ಥರಹಿತ ಜೀವನ, ತ್ಯಾಗದಿಂದ ಮಾತ್ರವೇ ಅಮೃತತ್ತ್ವ, ಅಮರತ್ವ ಪಡೆಯಲು ಸಾಧ್ಯ. ಅದನ್ನು ಮಾಡಿ ತೋರಿಸಿದವರು ಗುರುಗಳಾದ ಶ್ರೀ ಶಿವಕುಮಾರ ಸ್ವಾಮೀಜಿಯವರು. ಕಲಬುರಗಿಯ ಪೂಜ್ಯ ದೊಡ್ಡಪ್ಪ ಅಪ್ಪ ಅವರಿಗೆ ನೀಡಿದಷ್ಟು ಗೌರವ ಪೂಜ್ಯ ಶ್ರೀ ಶಿವಕುಮಾರ ಸ್ವಾಮೀಜಿಗಳಿಗೆ ನೀಡುವ ಮೂಲಕ ಹೈಕ ಶಿಕ್ಷಣ ಸಂಸ್ಥೆ ಅಪಾರ ಗೌರವ ಸಲ್ಲಿಸಿದೆ. ಅಲ್ಲದೆ ಪೂಜ್ಯರ ಪುತ್ಥಳಿ ಅನಾವರಣ, ಅವರ ಹೆಸರಿನಲ್ಲಿ ಆರ್ಕಿಟೆಕ್ಟ್ ಶಾಲೆ ಆರಂಭಿಸಿದ ಈ ಘಳಿಗೆ ನನ್ನನ್ನು ಭಾವುಕನನ್ನಾಗಿಸಿದೆ ಎಂದರು.





ಎಲ್ಲಿ ತುಮಕೂರು, ಎಲ್ಲಿಯ ಕಲಬುರಗಿ. ಆದರೂ ಎರಡಕ್ಕೂ ಬಿಡಿಸಲಾಗದ ಭಕ್ತಿ ಮತ್ತು ಪ್ರೀತಿಯ ನಂಟಿದೆ. ಕಲಬುರಗಿ ದೇವಮಾನವರ ಊರು, ತುಮಕೂರು ನಡೆದಾಡುವ ದೇವರ ಊರು. ಹೀಗಾಗಿ ಇಲ್ಲಿ ನಮ್ಮೆಲ್ಲರನ್ನು ಚೈತನ್ಯ ಸ್ವರೂಪಿ ಒಂದುಗೂಡಿಸಿದ್ದಾನೆ ಎಂದು ವ್ಯಾಖ್ಯಾನಿಸಿದರು.

ವಿಶ್ವಗುರು ಬಸವಣ್ಣ ಮತ್ತು ಬಸವಾದಿ ಶರಣರು ಜೀವನ ಸಂವಿಧಾನ ಕೊಟ್ಟವರು. ಸಪ್ತ ಸೂತ್ರ ಪಾಲನೆ ಜತೆಗೆ ಅವರು ಹಾಕಿಕೊಟ್ಟ ಭಕ್ತಿ, ಕಾಯಕ, ದಾಸೋಹ, ಸೇವೆ ಹಾದಿಯಲ್ಲಿ ನಡೆದರೆ ಎಲ್ಲವನ್ನೂ ಸಾಧಿಸಬಹುದು. ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿ ಸದಾ ಕಳಬೇಡ ಕೊಲಬೇಡ ಎಂಬ ಬಸವಣ್ಣನವರ ವಚನ ಉಲ್ಲೇಖಿಸುತ್ತಲೇ ಇದ್ದರು. ಅದನ್ನು ನಾವೆಲ್ಲರೂ ಪಾಲಿಸಬೇಕು ಎಂದು ತಿಳಿಸಿದರು.

ಎಚ್‌ಕೆಇ ಸಂಸ್ಥೆ ಅಧ್ಯಕ್ಷ ಡಾ.ಭೀಮಾಶಂಕರ ಬಿಲಗುಂದಿ ಅಧ್ಯಕ್ಷತೆ ವಹಿಸಿದ್ದರು. ಅವರು ಈ ಸಂದರ್ಭದಲ್ಲಿ ಮಾತನಾಡಿ ಸಂಸ್ಥೆ ಅಧ್ಯಕ್ಷನಾದ ಬಳಿಕ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿ ಆಶೀರ್ವಾದ ಪಡೆದಿದ್ದೆ. ವಾಸ್ತುಶಿಲ್ಪ ಶಾಲೆ ಆರಂಭಿಸುವ ಬಗ್ಗೆ ಚರ್ಚಿಸಿದಾಗ ಒಳ್ಳೆಯದಾಗಲಿ ಎಂದಿದ್ದರು. ಅವರ ಹೆಸರನ್ನೇ ಆರ್ಕಿಟೆಕ್ಟ್ ಸಂಸ್ಥೆಗೆ ಇಟ್ಟು ಪುತ್ಥಳಿ ಅನಾವರಣಗೊಳಿಸಿದ್ದು ಖುಷಿ ತಂದಿದೆ. ಮುಂದಿನ ದಿನಗಳಲ್ಲಿ ಮಾಸ್ಟರ್ ಆಫ್ ಅರ್ಬನ್ ಡೆವಲಪಮೆಂಟ್ ಮತ್ತು ಸೈಬರ್ ಕ್ರೈಂ ಕೋರ್ಸ್ ಆರಂಭಿಸಲಾಗುವುದು ಎಂದು ತಿಳಿಸಿದರು.

ವಿಧಾನ ಪರಿಷತ್ ಸದಸ್ಯ ಶ್ರೀ ಬಿ.ಜಿ.ಪಾಟೀಲ್, ಸಂಸ್ಥೆ ಉಪಾಧ್ಯಕ್ಷ ಡಾ.ಶಿವಾನಂದ ದೇವರಮನಿ, ಜಂಟಿ ಕಾರ್ಯದರ್ಶಿ ಡಾ.ನಾಗೇಂದ್ರ ಮಂತಾಳೆ, ಜಂಟಿ ಕಾರ್ಯದರ್ಶಿ ಶ್ರೀ ಗಂಗಾಧರ ಯಲಿ, ಆಡಳಿತ ಮಂಡಳಿ ಸದಸ್ಯರಾದ ಡಾ. ಸಂಪತಕುಮಾರ ಲೋಯಾ, ಡಾ.ಎಸ್.ಬಿ. ಕಾಮರಡ್ಡಿ, ಶ್ರೀ ಅರುಣಕುಮಾರ ಪಾಟೀಲ್, ಶ್ರೀ ಉದಯಕುಮಾರ ಚಿಂಚೋಳಿ, ಶ್ರೀ ನಿತೀನ್ ಜವಳಿ, ಶ್ರೀ ಸತೀಶ ಹಡಗಲಿಮಠ, ಶ್ರೀ ವಿಜಯಕುಮಾರ ದೇಶಮುಖ, ಶ್ರೀ ಬಸವರಾಜ ಪಾಟೀಲ್, ಶ್ರೀ ಅನಿಲಕುಮಾರ ಮರಗೋಳ, ಡಾ. ಶಿವಪುತ್ರಪ್ಪ ಹರವಾಳ, ಡಾ.ವೀರಭದ್ರಪ್ಪ ನಂದ್ಯಾಳ, ಪಿಡಿಎ ಕಾಲೇಜಿನ ಪ್ರಭಾರಿ ಪ್ರಾಚಾರ್ಯ ಶ್ರೀ ಶಶಿಧರ ಕಲಶೆಟ್ಟಿ ಇತರರಿದ್ದರು.

ಡಾ.ಶಿವಕುಮಾರ ಸ್ವಾಮೀಜಿ ಸ್ಕೂಲ್ ಆಫ್ ಆರ್ಕಿಟೆಕ್ಟ್‌ನ ಪ್ರಾಚಾರ್ಯ ಶ್ರೀ ವಜ್ರಕುಮಾರ್ ಮೆಹತಾ ಸ್ವಾಗತಿಸಿದರು. ಸಂಗಮೇಶ್ವರ ಮಹಿಳೆ ಮತ್ತು ಮಕ್ಕಳ ಆಸ್ಪತ್ರೆ ಮುಖ್ಯಸ್ಥೆ ಡಾ.ಅರುಂಧತಿ ಪೂಜ್ಯರನ್ನು ಪರಿಚಯಿಸಿದರು. ಎಂಎಸ್ಐ ಕಾಲೇಜಿನ ಪ್ರಾಧ್ಯಾಪಕ ಡಾ.ಈಶ್ವರಯ್ಯ ಮಠ, ಎಚ್‌ಕೆಇ ಮಹಿಳಾ ಕಾಲೇಜಿನ ಪ್ರಾಚಾರ್ಯ ಡಾ.ಸುಜಾತಾ ಬಿರಾದಾರ ಪಾಟೀಲ್ ನಿರೂಪಣೆ ಮಾಡಿದರು.

### ಗುರುವಂದನೆ

ಜಿಲ್ಲಾ ವೀರಶೈವ ಸಮಾಜ ಆಯೋಜಿಸಿದ್ದ ಗುರುವಂದನೆ ಕಾರ್ಯಕ್ರಮದಲ್ಲಿ ಗೌರವವನ್ನು ಸ್ವೀಕರಿಸಿ ಆಶೀರ್ವಚನ ನೀಡಿದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು "ಗುರುವಿಗೆ ತನು, ಲಿಂಗಕ್ಕೆ ಮನ, ಜಂಗಮಕ್ಕೆ ಧನದಿಂದ ಪೂಜಿಸುವ ವೀರಶೈವ ಸಂಪ್ರದಾಯ ಶ್ರೇಷ್ಠವಾಗಿದೆ. ಗುರು ತಾಯಿ ಇದ್ದಂತೆ. ತಾಯಿ ಮತ್ತು ಗುರು ಅತ್ಯಂತ ಶ್ರೇಷ್ಠರು. ಯಾರು ಇವರಿಬ್ಬರನ್ನು ಗೌರವಿಸುತ್ತಾರೋ ಅವರ ಬದುಕು ಬಂಗಾರವಾಗುತ್ತದೆ ಎಂದು ತಿಳಿಸಿದರು.

ಮನುಷ್ಯರಿಗೆ ಅಭಿಮಾನವೇ ದೊಡ್ಡ ಶಕ್ತಿ. ಸಮಾಜದ ಮೇಲೆ ಅಭಿಮಾನ ಇರಬೇಕು. ಅಭಿಮಾನದಿಂದ ಬದುಕು ಸಾಗಿಸಬೇಕು. ವೀರಶೈವ ಸಮಾಜವು ಮಾಜಿ ಮುಖ್ಯಮಂತ್ರಿ ವೀರೇಂದ್ರ ಪಾಟೀಲ್ ಮೂಲಕ ರಾಜ್ಯಕ್ಕೆ ದೊಡ್ಡ ಕೊಡುಗೆ ನೀಡಿದೆ. ಈ ಸಮಾಜದವರಿಗೆ ರಾಜಕೀಯದಲ್ಲಿ ಇನ್ನಷ್ಟು ಪ್ರಾತಿನಿಧ್ಯ ಸಿಗುವ ಅಗತ್ಯವಿದೆ.

ಯುವಕರೇ ಸಮಾಜದ ಶಕ್ತಿ. ಸಮಾಜಮುಖಿ ಕಾರ್ಯಗಳಲ್ಲಿ ತೊಡಗಿಸಿಕೊಳ್ಳುವ ಹಾಗೂ ಸಮಾಜದ ಮೇಲೆ ಪ್ರೀತಿ ಇರುವ ಯುವಕರನ್ನು ಬಳಸಿಕೊಂಡು







## ದಾಸೋಹಕ್ಕೆ ಕೊಡುಗೆ

ದಾಸೋಹಕ್ಕೆ ಎಂಎಲ್‌ಸಿ ೧ ಲಕ್ಷ ರೂ. ದೇಣಿಗೆ

ಬಡ ವಿದ್ಯಾರ್ಥಿಗಳಿಗೆ ವಸತಿ ಜತೆ ಉತ್ತಮ ಸಂಸ್ಕಾರಯುತ ಶಿಕ್ಷಣ ನೀಡುತ್ತಿರುವ ತುಮಕೂರಿನ ಸಿದ್ಧಗಂಗಾ ಮಠದ ದಾಸೋಹಕ್ಕೆ ವಿಧಾನ ಪರಿಷತ್ ಸದಸ್ಯ ಬಿ.ಜಿ. ಪಾಟೀಲ್ ವೈಯಕ್ತಿಕವಾಗಿ ಒಂದು ಲಕ್ಷ ರೂ. ದೇಣಿಗೆ ನೀಡಿದರು. ಜಿಲ್ಲಾ ದಾಲ್‌ಮಿಲ್ಲರ್ಸ್ ಅಸೋಸಿಯೇಷನ್ ೩೦ ಕ್ವಿಂಟಾಲ್ ತೊಗರಿಬೇಳೆ ದೇಣಿಗೆ ನೀಡಿತು. ಅಲ್ಲದೆ ವೈಯಕ್ತಿಕವಾಗಿ ಅನೇಕರು ದಾಸೋಹ ಕೈಂಕರ್ಯಕ್ಕೆ ಕೈಜೋಡಿಸಿದರು.

ವೀರಶೈವ ಸಮಾಜ ಸಂಘಟಿಸಬೇಕು. ನಮ್ಮ ಸಮಾಜವನ್ನು ಪ್ರೀತಿಸುವುದರ ಜತೆಗೆ ಅನ್ಯ ಧರ್ಮೀಯರು, ಸಮಾಜದವರನ್ನೂ ಗೌರವಿಸಬೇಕು ಎಂದು ಉಪದೇಶಿಸಿದರು.

ಕಲ್ಯಾಣ ಕರ್ನಾಟಕ ಪ್ರದೇಶ ಧಾರ್ಮಿಕವಾಗಿ ಶ್ರೀಮಂತಿಕೆ ಹೊಂದಿದೆ. ನಮ್ಮ ಗುರುಗಳ ಪ್ರತಿಮೆ ಅನಾವರಣ ಮಾಡುವ ಮೂಲಕ ಹೈದರಾಬಾದ್ ಕರ್ನಾಟಕ ಶಿಕ್ಷಣ ಸಂಸ್ಥೆ ಗುರುಗಳ ಸೇವೆ ಸ್ಮರಿಸಿದೆ ಎಂದರು.

ಮುಗಳನಾಗವಿ ಕಟ್ಟಿಮನಿ ಹಿರೇಮಠದ ಶ್ರೀ ಅಭಿನವ ಸಿದ್ಧಲಿಂಗ ಶಿವಾಚಾರ್ಯ, ಮಾದನಹಿಪ್ಪರಗಾದ ಶ್ರೀ ಅಭಿನವ ಶಿವಲಿಂಗ ಸ್ವಾಮೀಜಿ ಸಾನ್ನಿಧ್ಯ ವಹಿಸಿದ್ದರು. ಶಾಸಕರಾದ ರಾಜಕುಮಾರ ಪಾಟೀಲ್ ತೆಲ್ಕೂರ, ಶ್ರೀ ಬಿ.ಜಿ. ಪಾಟೀಲ್, ಹೈದರಾಬಾದ್ ಕರ್ನಾಟಕ ಶಿಕ್ಷಣ ಸಂಸ್ಥೆ ಅಧ್ಯಕ್ಷ ಡಾ.ಭೀಮಾಶಂಕರ ಬಿಲಗುಂದಿ, ಜಿಲ್ಲಾ ವೀರಶೈವ ಸಮಾಜದ ಗೌರವಾಧ್ಯಕ್ಷ ಶ್ರೀ ಬಸವರಾಜ ದೇಶಮುಖ, ಶ್ರೀ ಜಿ.ಡಿ. ಅಣಕಲ್, ಶ್ರೀ ನೀಲಕಂಠರಾವ ಮೂಲಗೆ, ಡಾ. ಶ್ರೀಶೈಲ ಘೂಳಿ, ಶ್ರೀ ರಾಜಕುಮಾರ ಕೋಟೆ, ಶ್ರೀ ದೇವೆಂದ್ರಪ್ಪ ಆವಂಟಿ, ಶ್ರೀ ಚನ್ನಬಸಯ್ಯ ಗುರುವಿನ, ಶ್ರೀ ಅಪ್ಪು ಕಣಕಿ, ಶ್ರೀ ಶಾಂತಕುಮಾರ ಬಿಲಗುಂದಿ ಉಪಸ್ಥಿತರಿದ್ದರು.

ವೀರಶೈವ ಸಮಾಜದ ಜಿಲ್ಲಾಧ್ಯಕ್ಷ ಶ್ರೀ ಅರುಣಕುಮಾರ ಪಾಟೀಲ್ ಸ್ವಾಗತಿಸಿದರು. ಆರ್.ಜೆ. ವಾಣಿಶ್ರೀ ನಿರೂಪಣೆ ಮಾಡಿದರು. ಪೊಲೀಸ್ ಇಲಾಖೆ ನಿವೃತ್ತ ಅಧಿಕಾರಿಗಳು ಹಾಗೂ ಸಮಾಜದ ವಿವಿಧ ಕ್ಷೇತ್ರದ ಸಾಧಕರನ್ನು ಸನ್ಮಾನಿಸಲಾಯಿತು. ಜಿಲ್ಲಾ ವೀರಶೈವ ಯುವ ಘಟಕವನ್ನು ಸ್ವಾಮೀಜಿ ಉದ್ಘಾಟಿಸಿದರು.

ವರದಿ : ಚನ್ನಬಸವಯ್ಯ ಗುರುವಿನ




ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಕಲಬುರಗಿಯಲ್ಲಿರುವ ಸಿದ್ಧಗಂಗಾ ನಗರಕ್ಕೆ ಭೇಟಿ ನೀಡಿದ ಸಂದರ್ಭದಲ್ಲಿ ಶ್ರೀಯುತರಾದ ಶರಣಗೌಡ ಪಾಟೀಲ್, ಎಂ.ಬಿ. ಅಂಬಲಗಿ, ರಾಜಶೇಖರ ತಿಮ್ಮನಾಕ, ಸಿದ್ದರಾಮಯ್ಯ ಮಠ, ಬಸವರಾಜ ಖಂಡೇರಾವ, ದೇವೆಂದ್ರಪ್ಪ ಅವಂಟಿ ಮೊದಲಾದವರು ಉಪಸ್ಥಿತರಿದ್ದರು.



## ಕಹಿಬೇವು

"ಬೇವು ಬಾಯಿಗೆ ಕಹಿ ಉದರಕ್ಕೆ ಸಿಹಿ" ಎಂಬ ನಾಣ್ನುಡಿ ಬೇವಿನ ಮಹತ್ವವನ್ನು ತಿಳಿಸುತ್ತದೆ. ನಮ್ಮ ಸುತ್ತಮುತ್ತ ಬೆಳೆಯುವ ಬೇವು ಅನೇಕ ಔಷಧಿಗಳನ್ನು ಒಳಗೊಂಡಿದೆ.

* ಹಾಲಿನಲ್ಲಿ ಅರೆದ ಕಹಿಬೇವಿನ ಎಲೆಗಳ ಮಿಶ್ರಣವನ್ನು ರಾತ್ರಿ ಮಲಗುವ ಮುನ್ನ ಅಂಗಾಲುಗಳಿಗೆ ಹಚ್ಚಿಕೊಂಡು ಮಲಗುವುದರಿಂದ ಚೆನ್ನಾಗಿ ನಿದ್ರೆ ಬರುತ್ತದೆ.
* ಕಹಿಬೇವಿನ ಎಲೆಗಳನ್ನು ಹಾಕಿ ಕುದಿಸಿ ಆರಿಸಿದ ಕೊಬ್ಬರಿ ಎಣ್ಣೆಯನ್ನು ಸಂದುನೋವು, ಸ್ನಾಯು ನೋವಿರುವ ಜಾಗಕ್ಕೆ ಪ್ರತಿದಿನ ಹಚ್ಚಿ, ಮಸಾಜ್ ಮಾಡುವುದರಿಂದ ನೋವು ಶಮನವಾಗುತ್ತದೆ. ಕಹಿಬೇವಿನ ತೊಗಟೆ ಮತ್ತು ಎಲೆಯನ್ನು ಅರೆದು ಲೇಪಿಸಿಕೊಳ್ಳವುದರಿಂದ ಸಂದುನೋವು, ಬಾವು ಕಡಿಮೆಯಾಗುತ್ತದೆ.
* ಕಹಿಬೇವಿನ ಚಿಗುರೆಲೆಗಳನ್ನು ಅರೆದು ಸ್ವಲ್ಪ ಸ್ವಲ್ಪ ತಿನ್ನುವುದರಿಂದ ದೇಹದಲ್ಲಿನ ಸಕ್ಕರೆ ಪ್ರಮಾಣವನ್ನು ನಿಯಂತ್ರಿಸಬಹುದು.
* ವಾರಕ್ಕೊಮ್ಮೆ ಮುಖಕ್ಕೆ ಕಹಿಬೇವಿನ ಎಲೆಯ ಪೇಸ್ಟ್ ಹಚ್ಚಿಕೊಳ್ಳುವುದರಿಂದ ಮೊಡವೆಗಳು ಕಡಿಮೆಯಾಗುತ್ತವೆ. ಮೊಡವೆ ಕಡಮೆಯಾದ ಬಳಿಕ ಉಳಿಯುವ ಕಲೆಗಳನ್ನೂ ನಿವಾರಿಸಿ ಮೊಡವೆ ಆಗದಂತೆ ತಡೆಯುತ್ತದೆ.
* ಕಾಯಿಸಿದ ಬಿಸಿನೀರಿಗೆ ಕಹಿಬೇವಿನ ಎಲೆಗಳನ್ನು ಹಾಕಿ ಬರುವ ಉಗಿಯನ್ನು ಮುಖಕ್ಕೆ ಹಿಡಿದರೆ ಮುಖದಲ್ಲಿನ ಕಲೆಗಳು ನಿವಾರಣೆಯಾಗಿ ಕಾಂತಿ ವೃದ್ಧಿಸುತ್ತದೆ.
* ಕಹಿಬೇವಿನ ಎಲೆಯಿಂದ ತಯಾರಿಸಿದ ಎಣ್ಣೆಯನ್ನು ಬಳಸಿದರೆ ಚರ್ಮದ ಮೇಲಿನ ತುರಿಕೆ, ಗಂಧೆ, ಸಿಡುಬು ಮೊದಲಾದ ತೊಂದರೆಗಳು ಕಡಿಮೆಯಾಗುತ್ತವೆ. ತುರಿಕೆ, ಸಿಡುಬು ಇರುವಲ್ಲಿ ಪೇಸ್ಟ್ ಮಾಡಿ ಹಚ್ಚುವುದರಿಂದ ದೇಹದಲ್ಲಿರುವ ಬ್ಯಾಕ್ಟೀರಿಯಾಗಳು ತೊಲಗಿ ರೋಗಮುಕ್ತರಾಗಬಹುದು.

(ಸಂಗ್ರಹ)

## 'ಸಿದ್ಧಗಂಗಾ' ಮಾಸಪತ್ರಿಕೆ ಆಜೀವ ಸದಸ್ಯರಲ್ಲಿ ಮನವಿ

ಶ್ರೀಮಠದ ಮುಖವಾಣಿ ಸಿದ್ಧಗಂಗಾ ಮಾಸಪತ್ರಿಕೆಗೆ ಆಜೀವ ಸದಸ್ಯರಾಗಿರುವುದು ಸಂತೋಷ. ಇದರಿಂದ **'ಸಿದ್ಧಗಂಗಾ'** ನಿರಂತರವಾಗಿ ನಿಮ್ಮ ಮನ-ಮನೆ ಬೆಳಗುತ್ತಲಿದೆ. ತಮಗೆ ಮಠದ ಪರವಾಗಿ ಧನ್ಯವಾದಗಳು.

ಕಾಗದ, ಮುದ್ರಣ, ಅಂಚೆ ವೆಚ್ಚ ಇನ್ನಿತರೆ ವೆಚ್ಚಗಳು ದುಬಾರಿಯಾಗಿದ್ದು, ಪತ್ರಿಕೆ ಮುನ್ನಡೆಸಲು ಕಷ್ಟವಾಗುತ್ತದೆ ಎಂಬುದನ್ನು ತಮ್ಮ ಗಮನಕ್ಕೆ ತರುತ್ತಲೇ ಬರುತ್ತಿದ್ದೇವೆ.

ಪ್ರಾರಂಭಕ್ಕೆ ೫೦೦/- ರೂ. ೧೦೦೦/-ರೂ ಆಜೀವ ಸದಸ್ಯರಾಗಲು ಚಂದಾ ಸಂದಾಯ ಮಾಡಿದ್ದಿರಿ. ಇದರಿಂದ ಬ್ಯಾಂಕ್ ಠೇವಣಿಯಿಂದ ಬರುವ ಬಡ್ಡಿ ಕೇವಲ ೫೦/- ರೂ, ೧೦೦/- ಮಾತ್ರ. ಇಷ್ಟು ಕನಿಷ್ಠ ಹಣದಿಂದ ಪತ್ರಿಕೆ ಮುದ್ರಣ ತೊಡಕಾಗಿ ನಷ್ಟವಾಗುತ್ತಿದೆ. ಪ್ರಯುಕ್ತ ಈ ಆರ್ಥಿಕ ಕೊರತೆಯನ್ನು ದಯವಿಟ್ಟು ಅರ್ಥಮಾಡಿಕೊಳ್ಳುವಿರೆಂದು ಭಾವಿಸಿದ್ದೇವೆ.

**ಪ್ರಸ್ತುತ ಆಜೀವ ಚಂದಾ ೨೦೧೪ ವರ್ಷದಿಂದ ೧೫೦೦/- ರೂ ನಿಗದಿ ಮಾಡಿದೆ. ಈ ಮೊತ್ತಕ್ಕೆ ಹೊಂದುವಂತೆ ಹಿಂದೆ ೫೦೦/- ರೂ ಸಂದಾಯ ಮಾಡಿರುವವರು ಬಾಕಿ ೧೦೦೦/- ರೂ ಸಂದಾಯ ಮಾಡಬೇಕು. ೧೦೦೦/- ರೂ ಸಂದಾಯ ಮಾಡಿರುವವರು ಬಾಕಿ ೫೦೦/- ಸಂದಾಯ ಮಾಡಲು ಕೋರಿದೆ.**

ದಯಮಾಡಿ ತಮಗೆ ಅನ್ವಯಿಸುವ ಬಾಕಿ ಚಂದಾ ಮೊತ್ತವನ್ನು ಸಿದ್ಧಗಂಗಾ ಮಾಸಪತ್ರಿಕೆ ಹೆಸರಿನಲ್ಲಿ **ನಗದು/ಚೆಕ್/ಡಿ.ಡಿ.** ಮೂಲಕ ತಪ್ಪದೆ ಪತ್ರಿಕೆ ಆಜೀವ ಸದಸ್ಯತ್ವದ (LM) ಸಂಖ್ಯೆ ನಮೂದಿಸಿ ದೂರವಾಣಿ/ಮೊಬೈಲ್ ನಂಬರ್‌ನೊಂದಿಗೆ ಈ ಕೆಳಗಿನ ವಿಳಾಸಕ್ಕೆ ಕಳುಹಿಸಿ ಕೊಡುವುದರ ಮೂಲಕ **'ಸಿದ್ಧಗಂಗಾ'** ಮುನ್ನಡೆಗೆ ಸಹಕರಿಸಬೇಕಾಗಿ ಕಳಕಳಿಯಿಂದ ಪ್ರಾರ್ಥಿಸುತ್ತೇವೆ. ವಿಳಾಸ ಬದಲಾವಣೆಯಾಗಿದ್ದರೆ ದಯವಿಟ್ಟು ಬದಲಾದ ವಿಳಾಸ ಹಾಗೂ ತಮ್ಮ ದೂರವಾಣಿ ಸಂಖ್ಯೆಯನ್ನು ತಮ್ಮ (LM) ಸಂಖ್ಯೆಯೊಂದಿಗೆ ಕಾರ್ಡಿನಲ್ಲಿ ಬರೆದು ಕಳುಹಿಸಿಕೊಟ್ಟರೆ ಪತ್ರಿಕೆ ತಮಗೆ ತಲುಪಲು ಅನುಕೂಲವಾಗುತ್ತದೆ.

ಪ್ರಕಾಶಕರು,
'ಸಿದ್ಧಗಂಗಾ' ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲೆ-೫೭೨ ೧೦೪.
ದೂರವಾಣಿ : ೦೮೧೬-೨೨೮೨೫೨೨









ಶ್ರೀ ಸಿದ್ಧಗಂಗಾ ಕೃಷಿ ಮತ್ತು ಕೈಗಾರಿಕಾ ವಸ್ತುಪ್ರದರ್ಶನದ ಮುಕ್ತಾಯ ಹಾಗೂ ಬಹುಮಾನ ವಿತರಣಾ ಸಮಾರಂಭದಲ್ಲಿ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು, ಸನ್ಮಾನ್ಯ ಅರಣ್ಯ ಸಚಿವರಾದ ಶ್ರೀ ಆನಂದ್‌ಸಿಂಗ್‌ರವರು, ಸನ್ಮಾನ್ಯ ಲೋಕಸಭಾ ಸದಸ್ಯರಾದ ಶ್ರೀ ಜಿ.ಎಸ್. ಬಸವರಾಜುರವರು ಹಾಗೂ ಮೊದಲಾದ ಗಣ್ಯರು ಭಾಗವಹಿಸಿದ್ದರು.




ದಿನಾಂಕ ೨೮-೧೧-೨೦೨೦ ರಿಂದ ೦೩-೦೨-೨೦೨೦ ರವರೆಗೆ ಚೆನ್ನೈನ '೧೧ನೇ ಹಿಂದು ಸ್ಪಿರುಚಿಯಲ್ ಸೋಷಿಯಲ್‌ಫೇರ್' ನಲ್ಲಿ ಶ್ರೀ ಸಿದ್ಧಗಂಗಾ ಮಠದಿಂದ ಪ್ರದರ್ಶನ ನೀಡಿ ಭಾಗವಹಿಸಿದವರು ಶ್ರೀ ರಾಜಶೇಖರ್, ಶ್ರೀ ಜಿ. ಗವಿಸಿದ್ಧಯ್ಯ, ಮತ್ತು ಶ್ರೀ ನವೀನ್‌ಕುಮಾರ್ ಹಾಗೂ ಸಂಘಟಕರಾದ ಚೆನ್ನೈನ ಶ್ರೀಮತಿ ರಾಜಲಕ್ಷ್ಮಿ ಅವರು

ಸ್ಥಾಪನೆ : 1995

ಶುಭಾಶಯಗಳೊಂದಿಗೆ
ಭಾರತೀಯ ರಿಸರ್ವ್ ಬ್ಯಾಂಕ್ ಲೈಸೆನ್ಸ್ ಪುರಸ್ಕೃತ

ದೂರವಾಣಿ : 2277267
ಫ್ಯಾಕ್ಸ್ : 2277267




## ಸಿದ್ಧಗಂಗಾ ಅರ್ಬನ್ ಕೋ-ಆಪರೇಟಿವ್ ಬ್ಯಾಂಕ್ ಲಿ.,

ಬಿ.ಹೆಚ್.ರಸ್ತೆ, ತುಮಕೂರು-572 102

### ಪ್ರಗತಿ ನೋಟ (31.03.2019 ರಲ್ಲಿದ್ದಂತೆ) ಮತ್ತು ಠೇವಣಿಗಳು (ಲಕ್ಷರೂ.ಗಳಲ್ಲಿ)

| | | | |
|---|---|---|---|
| ಸದಸ್ಯರ ಸಂಖ್ಯೆ | 4264 | ಸಾಲಗಳು | 10427.84 |
| ಪಾವತಿಯಾದ ಷೇರು ಬಂಡವಾಳ | 489.47 | ಹೂಡಿಕೆಗಳು | 4647.76 |
| ಆಪದ್ಧನ ಮತ್ತು ನಿಧಿಗಳು | 1736.60 | ದುಡಿಯುವ ಬಂಡವಾಳ | 15891.89 |
| ಠೇವಣಿಗಳು | 13665.82 | ನಿವ್ವಳ ಲಾಭ (ತೆರಿಗೆ ನಂತರ) | 253.70 |

### ಠೇವಣಿ ಮೇಲಿನ ಬಡ್ಡಿ ದರಗಳು

| | | | |
|---|---|---|---|
| 46 ದಿವಸಗಳಿಂದ 90 ದಿವಸಗಳವರೆಗೆ | - ಶೇ. 5% | 1 ವರ್ಷ ಮೇಲ್ಪಟ್ಟು 2 ವರ್ಷದವರೆಗೆ | - ಶೇ. 7.5% |
| 91 ದಿವಸಗಳಿಂದ 180 ದಿವಸಗಳವರೆಗೆ | - ಶೇ. 6% | 2 ವರ್ಷ ಮೇಲ್ಪಟ್ಟು 3 ವರ್ಷದವರೆಗೆ | - ಶೇ. 8% |
| 181 ದಿವಸಗಳಿಂದ 365 ದಿವಸಗಳವರೆಗೆ | - ಶೇ. 7% | 3 ವರ್ಷ ಮೇಲ್ಪಟ್ಟು | - ಶೇ. 8% |

ಉಳಿತಾಯ ಖಾತೆ - ಶೇ. 4%

ಹಿರಿಯ ನಾಗರಿಕರಿಗೆ,
ಒಂದು ವರ್ಷ ಮೇಲ್ಪಟ್ಟ ಠೇವಣಿಗಳ ಮೇಲೆ ½% ಅಧಿಕ ಬಡ್ಡಿ ದರವನ್ನು ಅವರ ಠೇವಣಿಗಳ ಮೇಲೆ ನೀಡಲಾಗುವುದು.
ಒಂದು ಲಕ್ಷದವರೆಗಿನ ಠೇವಣಿಗಳ ವಿಮಾ ರಕ್ಷಣೆ ಇದೆ. (ಡಿ.ಐ.ಸಿ.ಜಿ.ಸಿ.)
ಜಂಟಿಸಾಲ, ಗೃಹನಿರ್ಮಾಣ ಸಾಲ, ಆಸ್ತಿ ಅಡಮಾನ ಸಾಲ, ಹೊಸ /ಹಳೆಯ ವಾಹನಾಧಾರ ಸಾಲ, ಯಂತ್ರೋಪಕರಣ ಸಾಲ,
ವಸ್ತು ಬಳಕೆದಾರರ ಸಾಲ, ಮೀರಳೆತ, ವೇತನಾಧಾರ, ಚಿನ್ನಾಭರಣ ಸಾಲಗಳಿಗೆ ಬಡ್ಡಿದರ ಶೇ. 13 ರಿಂದ 15

### ನೂತನ ಶಾಖೆಗಳು :

ಸಿದ್ಧಗಂಗಾ ಅರ್ಬನ್ ಕೋ-ಆಪರೇಟಿವ್ ಬ್ಯಾಂಕ್ ಲಿ.,
ಸಿದ್ಧಗಂಗಾ ಕಾಲೇಜ್ ಕ್ಯಾಂಪಸ್, ಗಾಂಧಿನಗರ
ಬಿ.ಹೆಚ್. ರಸ್ತೆ, ತುಮಕೂರು
ಫೋನ್ : 0816-2277273

ಸಿದ್ಧಗಂಗಾ ಅರ್ಬನ್ ಕೋ-ಆಪರೇಟಿವ್ ಬ್ಯಾಂಕ್ ಲಿ.,
ಹಾಸ್ಪಿಟಲ್ ರಸ್ತೆ, ದಾಬಸಪೇಟೆ (ಸೋಂಪುರ)
ನೆಲಮಂಗಲ ತಾ॥, ಬೆಂಗಳೂರು ಗ್ರಾಮಾಂತರ ಜಿಲ್ಲೆ
ಫೋನ್ : 080-7735409

ಸಿದ್ಧಗಂಗಾ ಅರ್ಬನ್ ಕೋ-ಆಪರೇಟಿವ್ ಬ್ಯಾಂಕ್ ಲಿ.,
ಕೆ.ಎಸ್.ಆರ್.ಟಿ.ಸಿ. ಬಸ್ ಸ್ಟಾಂಡ್ ರಸ್ತೆ,
ಒಕ್ಕಲಿಗರ ಸಮುದಾಯ ಭವನದ ಎದುರು
ದೊಡ್ಡಬಳ್ಳಾಪುರ, ಬೆಂಗಳೂರು ಗ್ರಾಮಾಂತರ ಜಿಲ್ಲೆ.
ಫೋನ್ : 080-27622090

ಸಿದ್ಧಗಂಗಾ ಅರ್ಬನ್ ಕೋ-ಆಪರೇಟಿವ್ ಬ್ಯಾಂಕ್ ಲಿ.,
ವಿಜಯನಗರ ಶಾಖೆ. 27/1, 3ನೇ ಮುಖ್ಯ ರಸ್ತೆ, 3ನೇ ಅಡ್ಡರಸ್ತೆ,
ವಿಜಯನಗರ, ಬೆಂಗಳೂರು- 560 040
ಫೋನ್ : 080-23301270

ಶ್ರೀ ಟಿ.ಕೆ. ನಂಜುಂಡಪ್ಪ
ಅಧ್ಯಕ್ಷರು

ಶ್ರೀ ಕೆ.ಎಸ್. ಶಂಕರಯ್ಯ
ಉಪಾಧ್ಯಕ್ಷರು

ನಿರ್ದೇಶಕರು

ಶ್ರೀ ಮಹೇಶಪ್ಪ
ಶ್ರೀ ಎಸ್. ವಿಶ್ವನಾಥಯ್ಯ
ಶ್ರೀ ಚಿಕ್ಕಯ್ಯ. ಆರ್.
ಶ್ರೀಮತಿ ಮಂಜುಳಾ ಪ್ರಸಾದ್
ಶ್ರೀ ಡಾ. ಎಸ್. ಪರಮೇಶ್
ಶ್ರೀ ಡಾ. ಆರ್.ಸಿ. ಪುಟ್ಟಬುದ್ದಿ
ಶ್ರೀ ರಮೇಶ್ .ಸಿ.ಆರ್
ಶ್ರೀ ರಾಮಯ್ಯ
ಶ್ರೀ ಬಿ.ಎಸ್. ರುದ್ರೇಶಯ್ಯ
ಶ್ರೀ ಟಿ.ಎಮ್. ಸ್ವಾಮಿ
ಶ್ರೀಮತಿ ರೇಣುಕಾ ಲತಾ. ಎಸ್.

ಹೆಚ್.ಕೆ.ಶಿವಪ್ರಕಾಶ್
ಮುಖ್ಯಕಾರ್ಯನಿರ್ವಹಣಾಧಿಕಾರಿ

"Siddaganga" Monthly - Postal Reg. No. L2/RNP/385/TMR/2018-20
Posted at RMS, Tumkur-572 102

RNI No. 17139/69






# ಸಿದ್ಧಗಂಗಾ ಆಸ್ಪತ್ರೆ ಮತ್ತು ಸಂಶೋಧನಾ ಕೇಂದ್ರ

ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿ ರಸ್ತೆ, (ಬಿ.ಹೆಚ್. ರಸ್ತೆ), ತುಮಕೂರು

**Ph: 0816-6602222 | Emergency No. : 6602288 | 6602299**

**E: info@siddagangahospital.com**

## ಸೂಪರ್ ಸ್ಪೆಷಾಲಿಟಿ ಸೌಲಭ್ಯಗಳು

- ನ್ಯೂರಾಲಜಿ ಮತ್ತು ನ್ಯೂರೋಸರ್ಜರಿ
- ಕಾರ್ಡಿಯಾಲಜಿ ಮತ್ತು ಸಿ.ಟಿ.ವಿ.ಎಸ್
- ಮೆಡಿಕಲ್ ಮತ್ತು ಸರ್ಜಿಕಲ್ ಗ್ಯಾಸ್ಟ್ರೋಎಂಟರಾಲಜಿ
- ಮೆಡಿಕಲ್ ಮತ್ತು ಸರ್ಜಿಕಲ್ ಆಂಕೊಲಜಿ
- ನೆಫ್ರಾಲಜಿ ಮತ್ತು ಯುರಾಲಜಿ
- ಡಯಬಿಟಾಲಜಿ ಮತ್ತು ಎಂಡೋಕ್ರೈನಾಲಜಿ
- ಪಲ್ಮನಾಲಜಿ • ರುಮಟಾಲಜಿ
- ಪ್ಲಾಸ್ಟಿಕ್ ರಿಕನ್‌ಸ್ಟ್ರಕ್ಟೀವ್ ಮತ್ತು ಕಾಸ್ಮೆಟಿಕ್ ಸರ್ಜರಿ
- ಜೆರಿಯಾಟ್ರಿಕ್ ಮೆಡಿಸಿನ್

## ವೈದ್ಯಕೀಯ ಸೌಲಭ್ಯಗಳು




## ತುರ್ತು ಚಿಕಿತ್ಸಾ ಸೇವೆಗಳು

- ಅಪಘಾತ, ತುರ್ತು ಚಿಕಿತ್ಸೆ ಮತ್ತು ಕ್ರಿಟಿಕಲ್ ಕೇರ್
- ಎಮ್.ಐ.ಸಿ.ಯು., ಐ.ಸಿ.ಸಿ.ಯು., ನ್ಯೂರೋ ಐ.ಸಿ.ಯು., ಎಸ್.ಐ.ಸಿ.ಯು., ಎನ್.ಐ.ಸಿ.ಯು., ಪಿ.ಐ.ಸಿ.ಯು
- ಕ್ಯಾಥ್ ಲ್ಯಾಬ್ ಸೇವೆಗಳು
- ಡಯಾಲಿಸಿಸ್ ಸೇವೆಗಳು
- ಡಯಾಗ್ನೋಸ್ಟಿಕ್ ಸೇವೆಗಳು
- ಇಂಟರ್‌ವೆನ್ಷನಲ್ ರೇಡಿಯಾಲಜಿ
- ಸಿ ಟಿ ಸ್ಕ್ಯಾನ್ – 16 ಸ್ಲೈಸ್
- ರಕ್ತ ನಿಧಿ ಮತ್ತು ಕಾಂಪೊನೆಂಟ್ಸ್
- ಆಂಬ್ಯುಲೆನ್ಸ್ ಸೇವೆಗಳು • ಔಷಧಾಲಯ

## ಇತರೆ ಸೌಲಭ್ಯಗಳು

- ಇಂಟರ್ನಲ್ ಮೆಡಿಸಿನ್
- ಮನೋವೈದ್ಯಕೀಯ ಸೇವೆಗಳು
- ಜನರಲ್ ಮತ್ತು ಲ್ಯಾಪರೊಸ್ಕೋಪಿಕ್ ಸರ್ಜರಿ
- ಬೆರಿಯಾಟ್ರಿಕ್ ಮತ್ತು ಮೆಟಾಬಾಲಿಕ್ ಸರ್ಜರಿ
- ಆರ್ಥೋಪೆಡಿಕ್ ಮತ್ತು ತುರ್ತು ಅಪಘಾತ ಚಿಕಿತ್ಸೆ
- ಎಂಡೋಸ್ಕೋಪಿ, ಕೊಲೊನೋಸ್ಕೋಪಿ ಮತ್ತು ಇ.ಆರ್.ಸಿ.ಪಿ
- ನಿಯೋನೇಟಾಲಜಿ, ಪೀಡಿಯಾಟ್ರಿಕ್ಸ್ ಮತ್ತು ಪೀಡಿಯಾಟ್ರಿಕ್ ಸರ್ಜರಿ
- ಪ್ರಸೂತಿ ಮತ್ತು ಸ್ತ್ರೀ ರೋಗ ಚಿಕಿತ್ಸೆ
- ಫೀಟಲ್ ಮೆಡಿಸಿನ್ • ಐ.ವಿ.ಎಫ್ ಕೇಂದ್ರ • ಇ.ಎನ್.ಟಿ.
- ನೇತ್ರ ಚಿಕಿತ್ಸೆ • ಡರ್ಮಟಾಲಜಿ
- ದಂತ ಚಿಕಿತ್ಸೆ ಮತ್ತು ಮ್ಯಾಕ್ಸಿಲೋಫೇಶಿಯಲ್ ಸರ್ಜರಿ
- ಮಿನಿಮಲಿ ಇನ್‌ವೇಸಿವ್ ಸರ್ಜರಿ ಮತ್ತು ಫಂಡೋಪ್ಲಿಕೇಷನ್


To

If undelivered please return to :
Editor
Siddaganga Monthly Magazine
Siddaganga Math
Tumkur-572 104

email ID : geetanjaligraphics@gmail.com